# ಶುಭ-ಆಶೀರ್ವಾದಗಳು



**ಪರಮ ಪೂಜ್ಯ ಸದ್ಗುರು ನಾರಾಯನಾಂದ ತೀರ್ಥ ಮಹಾಸ್ವಾಮಿಗಳು**

ಶ್ರೀ ಕ್ಷೇತ್ರ ಔದುಂಬರ, ತಾಲೂಕ ಪಲುಸ, ಜಿಲ್ಲಾ ಸಾಂಗ್ಲಿ - 416320, ಮಹಾರಾಷ್ಟ್ರ

ಪೂರ್ವಾಶ್ರಮ

**ಶ್ರೀ ವೇದಮೂರ್ತಿ ತಿಮ್ಮಣ್ಣ ನರಸಿಂಹ ದಿಕ್ಷಿತ, ಒಣಿಕೈ,**

(02/09/1886 - 15/02/1968)

ಪೋಸ್ಟ: ಪಂಚಲಿಂಗ, ತಾಲೂಕ : ಶಿರಸಿ, ಉತ್ತರಕನ್ನಡ 581403 ಕರ್ನಾಟಕ

ಶ್ರೀ ತಿಮ್ಮಣ್ಣ ಭಟ್ಟ ಮತ್ತು ಶ್ರೀಮತಿ ಯಮುನಾ ಅವರ ಕಿರು ಪರಿಚಯ

ತಿಮ್ಮಣ್ಣ ಭಟ್ಟರು ಭಾದ್ರಪದ ಶುದ್ಧ ಪಂಚಮಿ 1808ರಲ್ಲಿ ಜನನ, (ಗುರುವಾರ 2ನೆ ಸೆಪ್ಟಂಬರ್ 1886). 8 ವರ್ಷಕ್ಕೆ ಉಪನಯನ, ಗೋಕರ್ಣದ ಗಾಯತ್ರಿ ತಿಮ್ಮಣ್ಣ ಭಟ್ಟರಲ್ಲಿ ಕೃಷ್ಣ ಯುಜುರ್ವೇದ ಅಭ್ಯಾಸ. ಶ್ರೀ ಶಿವಾನಂದ ಸರಸ್ವತಿ ಶಿಗೆಹಳ್ಳಿ ಅವರ ಸನ್ಯಾಸ ದೀಕ್ಷೆ ಸಮಾರಂಭದ ಪೌರೋಹಿತ್ಯ ವಹಿಸಿದರು. ಕಡಬಾಳದ ಯಮುನಾ ಅವರನ್ನು ಮದುವೆಯಾಗಿ ನರಸಿಂಹ, ಯಜ್ಞನಾರಾಯಣ, ಮಹಾದೇವಿ, ದತ್ತಾತ್ರೇಯ, ದಕ್ಷಿಣಾಮೂರ್ತಿ, ರಾಮಚಂದ್ರ, ಗಂಗಾ ಒಟ್ಟು 7 ಮಕ್ಕಳನ್ನು ಪಡೆದರು ಹಾಗೂ ಅಗ್ನಿಹೋತ್ರವನ್ನು ಶುರು ಮಾಡಿದರು. ಸೋಮಯಾಗ ಯಜ್ಞವನ್ನು ಪೂರೈಸಿ ತಿಮ್ಮಣ್ಣ ದಿಕ್ಷಿತ್ ಎನಿಸಿಕೊಂಡರು. ಚಾತುರ್ಮಾಸ ಯಾಗ ಮತ್ತು ನಕ್ಷತ್ರ ಯಾಗಗಳನ್ನೂ ನೆರವೇರಿಸಿದರು. 30ನೆ ವಯಸ್ಸಿನಲ್ಲಿ ದತ್ತಮಂದಿರವನ್ನು ಸ್ಥಾಪಿಸಿದರು. ಶ್ರೀಧರ ಸ್ವಾಮೀ ಮತ್ತು ಇತರರಿಗೆ ಸನ್ಯಾಸ ದೀಕ್ಷೆ ಕೊಟ್ಟರು. ಶ್ರಾವಣ ಶುದ್ಧ ಪಂಚಮಿ ಬುಧವಾರ 1873 ಶಕೆ (ಆಗಸ್ಟ್ 8 1951) ಔದಂಬರದಲ್ಲಿ ತಾವೇ ಸನ್ಯಾಸ ದೀಕ್ಷೆ ಸ್ವೀಕರಿಸಿ ಶ್ರೀ ನಾರಾಯಣಾನಂದ ತೀರ್ಥರಾದರು. ಟೆಂಬೆ ಮಹಾರಾಜ, ಅವಧೂತ ಸ್ವಾಮಿ, ಅಕ್ಕಲಕೋಟ ಮಹಾರಾಜ ಮುಂತಾದವರ ಒಡನಾಟ. ಔದಂಬರದಲ್ಲಿ ಶ್ರೀ ಗುರು ಶಿವಶಂಕರಾನಂದ ಆಶ್ರಮ ಸ್ಥಾಪನೆ. ದತ್ತಮಂದಿರ ಸ್ಥಾಪನೆ. ಮಾಘ ಬಹುಳ ಪಾಡ್ಯ 1889 ರಂದು ತಮ್ಮ 82ನೆ ವಯಸ್ಸಿನಲ್ಲಿ ಸಮಾಧಿ ಹೊಂದಿದರು. (ಗುರುವಾರ ಫೆಬ್ರವರಿ 15 1968)

# ಪ್ರಕಾಶಕರ ನುಡಿ

ಮನುಷ್ಯನಿಗೆ ಮಾತ್ರ ಧರ್ಮವನ್ನು ಆಚರಿಸುವ ಸಾಮರ್ಥ್ಯವಿರುವುದು. ಧರ್ಮಾಚರಣೆಯಿಂದಲೇ ಒಬ್ಬ ವ್ಯಕ್ತಿಯು ಸುಂದರವಾದ ಬದುಕನ್ನು ತಾನು ಅನುಭವಿಸುವುದಲ್ಲದೆ, ತನ್ನ ಕುಟುಂಬ, ಸಮಾಜ, ದೇಶ ಹೀಗೆ ಎಲ್ಲವನ್ನು ಬೆಳೆಸಿ ಮೋಕ್ಷ ಸಾಧನೆ ಸಾಧ್ಯವಾಗುವುದು. ಧರ್ಮದ ಸ್ವರೂಪವನ್ನು ವೇದಗಳು, ಶಾಸ್ತ್ರಗಳು, ಉಪನಿಷತ್ತುಗಳು, ಪುರಾಣಗಳು ಮುಂತಾದವುಗಳಿಂದ ತಿಳಿಯಬಹುದಾಗಿದೆ. ಅನೂಚಾನವಾಗಿ ಧರ್ಮಾಚರಣೆ ಮುಂದುವರೆಸಲು ನಮ್ಮ ಪೂರ್ವಜರು ಎಲ್ಲ ಸ್ತರಗಳಲ್ಲಿ ವ್ಯಕ್ತಿ, ಕುಟುಂಬ, ಸಮಾಜ, ದೇಶ, ಹಾಗೂ ಎಲ್ಲ ಕಾಲದಲ್ಲಿ ಅಂದರೆ ಬೆಳಿಗ್ಗೆ ಎದ್ದಾಗಿನಿಂದ ರಾತ್ರಿ ಮಲಗುವವರೆಗೆ, ಹುಟ್ಟಿದಾಗಿನಿಂದ ಸಾಯುವವರೆಗೆ ಮನುಷ್ಯನಾದವನು ಪಾಲಿಸಬೇಕಾದ ನಿಯಮಗಳನ್ನು ರೂಪಿಸಿದ್ದಾರೆ. ಈ ನಿಯಮಗಳು ಎಲ್ಲರಿಗೆ ಎಲ್ಲ ಕಾಲದಲ್ಲಿ ವ್ಯವಸ್ಥಿತವಾಗಿ ಸಿಗುವಂತಾಗಲು, ಸಮಾಜದ ಪ್ರತಿಯೊಬ್ಬನೂ ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ನಾಲ್ಕುವಿಧದ ಪುರುಷಾರ್ಥಗಳನ್ನು ಪಡೆಯಬೇಕೆಂಬ ಸಂಕಲ್ಪದಿಂದ, ಮಠಮಾನ್ಯಗಳು, ಸಂಘ ಸಂಸ್ಥೆಗಳು, ದೇವಾಲಯಗಳು, ಸನ್ಯಾಸಿಗಳು, ಪುರೋಹಿತರು, ಅರ್ಚಕರು ಹೀಗೆ ಅನೇಕರನ್ನೊಳಗೊಂಡ ಸುಂದರವಾದ ವ್ಯವಸ್ಥೆಯನ್ನು ಮುಂದಿನ ತಲೆಮಾರಿಗೆ ಕೊಂಡೊಯ್ಯುವುದೇ ಈ ಸಂಗ್ರಹದ ಉದ್ದೇಶ.

ಕೃಷ್ಣ ಯಜುರ್ವೇದ-ಬೋಧಾಯನೀಯ ಸ್ಮಾರ್ತ ಹವ್ಯಕ ಸಂಪ್ರದಾಯಸ್ಥ ಮನೆತನವಾದ ಓಣಿಕೈ ಕುಟುಂಬವು ಎಲ್ಲ ಧಾರ್ಮಿಕ - ವೈದಿಕ, ಹಬ್ಬ - ಹರಿದಿನಗಳು, ಹಿರಿಯರ ದಿನಗಳನ್ನು ಪೂರ್ವಜರು ಹಾಕಿಕೊಟ್ಟ ಪದ್ಧತಿಯಂತೆ ಅನೂಚಾನವಾಗಿ ನಡೆಸಿಕೊಂಡು ಬರುತ್ತಾ ಇದ್ದಾರೆ . ಅಪಾರ ಆಸ್ತಿಕ ಶಿಷ್ಯರನ್ನೂ ಕಾಲಮಾನಕ್ಕೆ ಅನುಗುಣವಾಗಿ ಅಲ್ಪಸ್ವಲ್ಪ ತಿದ್ದುಪಡಿಗಳೊಂದಿಗೆ ಮಾರ್ಗದರ್ಶಕ ಸ್ಥಾನದಲ್ಲಿ ನಿಂತು ಮುನ್ನಡೆಸಿಕೊಂಡು ಬರುತ್ತಿದ್ದಾರೆ.

ನಮ್ಮ ಕುಟುಂಬದವರು ಹಾಗೂ ಶಿಷ್ಯರು, ಬೆಂಗಳೂರು, ಔದುಂಬರ, ಮುಂತಾದ ಊರುಗಳಲ್ಲಿ ನೆಲೆಸಿದ್ದಾರೆ. ಅಲ್ಲಿಯೂ ಧಾರ್ಮಿಕ, ವೈದಿಕ ಆಚಾರ ವಿಚಾರಗಳನ್ನು ಮುಂದುವರಿಸಿಕೊಂಡು ಹೋಗಲು ಅನುಕೂಲವಾಗುವ ನಿಟ್ಟಿನಲ್ಲಿ, ಹಾಗೂ ಈ ಎಲ್ಲಾ ವಿಚಾರಗಳನ್ನು ಮುಂದಿನ ಪೀಳಿಗೆಗೆ ತಲುಪಿಸುವ ಗುರುತರವಾದ ಜವಾಬ್ದಾರಿಯನ್ನು ನಿರ್ವಹಿಸುವತ್ತ, ಪ ಪೂ ನಾರಾಯಣಾನಂದ ತೀರ್ಥ ಪ್ರತಿಷ್ಠಾನವು ಶ್ರೀಮತಿ ಕಮಲಾ ದಕ್ಷಿಣಾಮೂರ್ತಿ ಗ್ರಂಥಮಾಲಿಕೆಯಡಿಯಲ್ಲಿ ಪ್ರಕಟಣಾ ಕಾರ್ಯದಲ್ಲಿ ತೊಡಗಿಸಿಕೊಂಡಿದೆ.

ಆಸಕ್ತ ಜನಸಾಮಾನ್ಯರಿಗೆ ಸರಳ ಕನ್ನಡಭಾಷೆಯಲ್ಲಿ, ಚಿಕ್ಕ ಚಿಕ್ಕ ಪ್ರಕಟಣೆಗಳ ಮೂಲಕ ಉಚಿತವಾಗಿ ಒದಗಿಸುವ ಉದ್ದೇಶ ಪ್ರತಿಷ್ಠಾನದ್ದು. ಪ್ರತಿಷ್ಠಾನದ ಈ ಸೇವಾ ಕಾರ್ಯದಲ್ಲಿ ವಿಷಯ ಸಂಗ್ರಹಣೆ, ಸಂಪಾದನೆ, ಕರಡು ಪರಿಷ್ಕರಣೆ, ವಿನ್ಯಾಸ ಹೀಗೆ ಹಲವು ಕೆಲಸಗಳಲ್ಲಿ ಸಲಹೆ, ಸಹಾಯ, ಸಹಕಾರ ನೀಡಿದ ನನ್ನ ತಮ್ಮ ಶ್ರೀ ಕೇಶವ, ಪತ್ನಿ ಶ್ರೀಮತಿ ಭಾಗೀರಥಿ, ಹಾಗೂ ಪ್ರತ್ಯಕ್ಷ-ಪರೋಕ್ಷವಾಗಿ ಪರಿಶ್ರಮಿಸಿದ ಎಲ್ಲರಿಗೂ ಕೃತಜ್ಞತೆಗಳು. ಆಸಕ್ತ ಆಸ್ತಿಕಲೋಕ ಸಹೃಯದಯರಾಗಿ ಸ್ವೀಕರಿಸಬೇಕೆಂದು ಕೋರಿದೆ.

**ಪ್ರಕಾಶಕರು**

# "Havyakara Haadugalu"

Smt. Kamala Daxinamurthy Grantha Maalike

Axi – 10

Compiled by

**Shridatta Dixit Onikai**,

Bengaluru

First Print: 2020

Rights: Publisher

Price: Free

Publisher



**Pa. Pu. Narayanananda Tirtha Pratistana (R)**

No 431, ShriRaksha, 7th Main Road, ISRO Layout,
Bengaluru - 560111, Karnataka, Cell No. 9448242402,
Email: sddixit@outlook.com

# ಹವ್ಯಕರ ಹಾಡುಗಳು

ಶ್ರೀಮತಿ ಕಮಲಾ ದಕ್ಷಿಣಾಮೂರ್ತಿ ಗ್ರಂಥಮಾಲಿಕೆ

ಅಕ್ಷಿ – 10

ಸಂಪಾದನೆ

**ಶ್ರೀದತ್ತ ದಿಕ್ಷಿತ ಓಣಿಕ್ಕೈ, ಬೆಂಗಳೂರು**

ಹಕ್ಕುಗಳು : ಪ್ರತಿಷ್ಠಾನದ ಅಧೀನದಲ್ಲಿವೆ

ಪ್ರಕಾಶಕರು



**ಪ. ಪೂ. ನಾರಾಯಣಾನಂದ ತೀರ್ಥ ಪ್ರತಿಷ್ಠಾನ (ರಿ)**

ಸಂ. 431, ಶ್ರೀರಕ್ಷಾ, 7ನೇ ಮುಖ್ಯ ರಸ್ತೆ, ಇಸ್ರೋ ಬಡಾವಣೆ, ಬೆಂಗಳೂರು-560111,

ಕರ್ನಾಟಕ, ದೂರವಾಣಿ : +91 94482 42402, sddixit@outlook.com

# ಪರಿವಿಡಿ

# 1 ಪೀಠಿಕೆ

ಮಾನವರಲ್ಲಿರುವ ದೇವರ ಬಗೆಗಿನ ಕಲ್ಪನೆಗಳು ಮತ್ತು ನಂಬುಗೆಗಳು ಸಾವಿರಾರುವರ್ಷ ಪುರಾತನವಾದವು. ಈ ನಂಬುಗೆ ಜನರ ದೈನಂದಿನ ಜೀವನದಲ್ಲಿ ಹಾಸುಹೊಕ್ಕಾಗಿವೆ. ಹಿಂದೂಸಮಾಜದ ಜನರಲ್ಲಿ ಏಕೈಕ ದೇವರ ಕಲ್ಪನೆಯನ್ನು ಉಪನಿಷತ ಕಾಲದಲ್ಲಿ ಕಾಣಬಹುದು. ಸಾಮಾನ್ಯಜನರ ಮಾನಸಿಕ ಇತಿಮಿತಿಗಳನ್ನು ಮತ್ತು ಬಯಕೆಗಳನ್ನು ಗಮನಿಸಿದ ತತ್ವಜ್ಞಾನಿಗಳು, ನೂರಾರು ದೇವತೆಗಳ ವಿವಿಧ ಆರಾಧನಾ ಮಾರ್ಗಗಳನ್ನು ರೂಪಿಸಿಕೊಟ್ಟರು. ಪೂಜೆ-ಪುನಸ್ಕಾರ, ಜಪ-ತಪ, ಹೋಮ-ಹವನ, ದಾನ-ತರ್ಪಣೆ-ಸಂತರ್ಪಣೆ, ನೃತ್ಯ-ಗಾಯನ, ಕೀರ್ಥನೆ-ಭಜನೆ, ಪ್ರದಕ್ಷಿಣೆ-ನಮಸ್ಕಾರ, ಕ್ಷೇತ್ರದರ್ಶನ-ತೀರ್ಥಸ್ನಾನ ಹೀಗೆ ಹತ್ತು-ಹಲವು ಮಾರ್ಗಗಳು. ಸೂರ್ಯ, ಗಣಪತಿ, ಅಂಬಿಕಾ, ಶಿವ, ವಿಷ್ಣು ಎಂಬ ಐದು ದೇವತೆಗಳ **ಪಂಚಾಯತನ** ಪೂಜಾಕ್ರಮವನ್ನು **ಶ್ರೀ ಆದಿ ಶಂಕರಾಚಾರ್ಯರು** ಪ್ರಚುರ ಪಡಿಸಿದರೆಂಬುದು ಪ್ರತೀತಿ. ಈ ಸಂಕಲನದಲ್ಲಿ, ಗೃಹಿಣಿಯರಿಗೆ ಉಪಯುಕ್ತವಾದ ಹಾಡುಗಳನ್ನು ಸಂಗ್ರಹಿಸಲಾಗಿದೆ. ಹಬ್ಬ-ಹರಿದಿನಗಳ ಆಚರಣೆಯಲ್ಲಿ ಮತ್ತು ಚೌಲ, ಉಪನಯನ, ವಿವಾಹಾದಿ ಮಂಗಳ ಕಾರ್ಯಗಳಲ್ಲಿ ಉಪಯೋಗಿಸಬಹುದಾಗಿದೆ. ಜಾತಿ, ಲಿಂಗ, ವಯಸ್ಸು ಭೇದವಿಲ್ಲದೆ ಈ ಹಾಡುಗಳನ್ನು ಹಾಡಿ, ಹಬ್ಬಗಳನ್ನು ಆಚರಿಸಿ ಸರ್ವರಿಗೂ ಸುಖ, ಶಾಂತಿ, ಸಮಾಧಾನ ದೊರೆತು ಇಚ್ಛಾ ಪೂರೈಕೆ ಆದರೆ ನಮ್ಮ ಶ್ರಮ ಸಾರ್ಥಕ.

----- ****** -----

# 2 ಶ್ರೀ ಗುರು

## 2.1 ಗುರು ಸ್ತುತಿ

ಗುರುವೆ ನೀನು ಮರೆತರೆನ್ನನು । ಪೊರೆವರಾರಿನ್ನು । ಶ್ರೀ ॥ ಪ ॥
ಶರಣು ಬಂದೀ ತರಳೆಯನ್ನು । ಪರಿಕೀಸದೆ ಬಿಡುವುದೇನು ॥ ಅ.ಪ ॥

ಸತತ ಸಂಸಾರದೊಳು ದುಡಿದು । ಹಿತವ ಕಾಣದಾದೆನಯ್ಯ ।
ಪತಿತಳಾದ ಎನ್ನ ಮನದ । ವ್ಯಥೆಯಿನ್ಯಾರಿಗರುಹಲೋ ॥ 1 ॥

ವಿಷಯ ಸುಖವೆ ಸುಖವಿದೆಂದು । ಕುಶಲದಿಂದ ಕಳೆದೆ ದಿನವ ।
ಕಸಬರಿಕೆಯಂತಾಯ್ತೀ ದೇಹ । ಉಸುರಲಿದನಿನ್ಯಾರ ಬಳಿಯೋ ॥ 2 ॥

ಹೇಸಿಕೆ ಶರೀರ ನಂಬಿ । ಘಾಸಿಯಾದೆನಯ್ಯ ದೇವ ।
ಈಸಲಾರೆ ಈ ಸಂಸಾರದೊಳ್ । ವಾಸವೆನಗಿನ್ಯಾರ ಬಳಿಯೋ ॥ 3 ॥

ನಾನು ನೀನೆಂತೆಂಬ ಉಭಯ । ಹೀನ ಗುಣವ ತ್ಯಜಿಸಿ ಮೆರೆವ ।
ಮಾನ ನಿಧಿಯೆ। ನಿನ್ನ ಪಾದ । ನಾನು ಬಿಡೆನು ಶ್ರೀಧರಾರ್ಯ ॥ 4 ॥

## 2.2 ಶ್ರೀ ಗುರು ಮಾನಸ ಪೂಜೆ

ಕಂಡು ನಿರ್ಮಲನಾದೆ । ಬಂದ ಶ್ರೀಧರನ । ಆನಂದ ಗುರುವರನ ॥ ಪ ॥
ಇಂದು ಹೃದಯೊಳು । ನಿಂದ ಚಿನ್ಮಯನ । ಸ್ವಾನಂದ ಚಿನ್ಮಯನ ॥ ಅ.ಪ ॥

ಕಾವಿಯಾಂಬರವನ್ನೆ ಕಾಯದೊಳು ಧರಿಸಿ । ಹಾವಿಗೆ ದ್ವಯಗಳ ಚರಣಾಲಂಕರಿಸಿ ।
ಭಸ್ಮ ಪಾವನ ಮೂರ್ತಿ ಶ್ರೀ ಗುರು ಬಂದ ಮನದೊಳು ।
ಶ್ರೀಧರ ಬಂದ ಮನದೊಳು ॥ 1 ॥

ಹಸ್ತಕಮಂಡಲು ಶಿಸ್ತಿನಿಂ ಪಿಡಿದು । ಮಸ್ತಕ ತ್ರಯದತ್ತ ಮೂರ್ತಿ ಧ್ಯಾನದೊಳು ।
ವಿಸ್ತಾರವಾಗಿಹ ಆತ್ಮ ರೂಪಿನೊಳು । ಸಚ್ಚಿದಾನಂದ ಶ್ರೀ ಗುರು ಬಂದ ಮನದೊಳು
॥ಶ್ರೀ॥ 2 ॥

ತಾಮಸವಾಗಿಹ ರಿಪು ಕಾಮಾದಿಗಳ । ನೇಮದಿಂದಲೆ ಜಯಿಸಿ । ಆತ್ಮವನರಿತು ।
ರಾಮ ನಾಮಾಮೃತ ಜಗಕೆ ಬೀರುತ । ಸ್ವಾಮಿ ಚಿತ್ಸುಖ ರೂಪ ಗುರು ಬಂದ ಮನದೊಳು ॥ಶ್ರೀ॥ 3 ॥

ಬ್ರಹ್ಮ ವಂಶದೊಳು ನೀ ಹುಟ್ಟಿ ಧರೆಯೊಳಗೆ । ಧರ್ಮ ಭ್ರಷ್ಟರಿಗೆಲ್ಲ ಜ್ಞಾನ ಬೋಧಿಸುತ ।
ನಿರ್ಮಲವಾಗಿಹ ಶಕ್ತಿಯ ಧ್ಯಾನಿಸುತ । ಕರ್ಮ ನಿಷ್ಕಾಮ ಶ್ರೀ ಗುರು ಬಂದ ಮನದೊಳು ॥ಶ್ರೀ॥ 4 ॥

ಯಮನಿಯಮಷ್ಟಾಂಗ ಯೋಗವಭ್ಯಸಿಸಿ । ಅಣಿಮಾದಿ ಅಷ್ಟ ಸಿದ್ಧಿಗಳ ವಶ ಪಡೆದು ।
ವಿಮಲಾದ್ರೋಗ್ರೃಹವಾಸಿ ಗಣಪನ ಪಿತ ಭಕ್ತ । ಅಮರ ಜ್ಯೋತಿಯ ತೇಜ ಗುರು ಬಂದ ಮನದೊಳು ॥ಶ್ರೀ॥ 5 ॥

## 2.3 ಗುರು ಶ್ರೀಧರರ ಸ್ತುತಿ

ಶ್ರೀಧರ ಗುರುವರ ಮಾಧವ ಭವಹರ ।
ಸಾಧುವರ್ಯನೆ ಸೀತಾರಾಮ್ ರಾಮ್ ರಾಮ್ ॥ ಪ ॥

ವಂದಿಪೆ ಮನ ಹೊಂದಿಪೆ । ಬಂದೆನು ಭವದೊಳು ।
ಕುಂದು ಕೊರತೆಯೊಳು । ನೊಂದೆನು ಗುರು ಸೀತರಾಮ್ ರಾಮ್ ರಾಮ್ ॥ 1 ॥

ದೇವನೆ ಸುಖ ಠಾವನೆ । ಸೇವಕ ಪ್ರಿಯನೆ ।
ಪಾವನ ಪಾದನೆ । ಕಾವುದು ಅನುದಿನ ರಾಮ್ ರಾಮ್ ರಾಮ್ ॥ 2 ॥

ಸುಂದರಾ ಶಮಾ ಮಂದಿರ । ದಂದುಗಾಸುರಹರ ।
ನಂದದಾಯಕ ದಯಾ । ಸಿಂಧು ಚಂದಿರ ಸೀತಾರಾಮ್ ರಾಮ್ ರಾಮ್ ॥ 3 ॥

ಕ್ಷಿತಿಯೊಳು ನಿಜ ಗತಿಯೊಳು । ಸತಿ ಪುರುಷರು ಎಂಬ ।
ಮತಿಯಳಿದಿಯೊ ಬಂದ । ಪತಿತರ ಪಾವನ ರಾಮ್ ರಾಮ್ ರಾಮ್ ॥ 4 ॥

ನಾಥನೆ ಪ್ರಖ್ಯಾತನೆ । ಮಾತಿನೊಳಗೆ ಬ್ರಹ್ಮ ।
ನೀತಿಯೊರೆದು ಭವ । ಭೀತಿ ಬಿಡಿಸಿದಾತ್ಮಾರಾಮ್ ರಾಮ್ ರಾಮ್ ॥ 5 ॥

# 3 ಗಣೇಶ

## 3.1 ಗಣಪತಿ ಸ್ತುತಿ

ಸಿದ್ಧಿಕಾಂತ ನಮೋಸ್ತುತೆ । ಜಯ ಬುದ್ಧಿಪ್ರೀತ ನಮೋಸ್ತುತೆ ॥
ಶುದ್ಧಶಾಂತ ನಮೋಸ್ತುತೆ । ಜಯ ರುದ್ರಜಾತ ನಮೋಸ್ತುತೆ ॥ ಪ ॥

ಗಜವದನ ಹೇರಂಭ ಗಣಪತಿ । ಭುಜಗ ಭೂಷಣ ಪುತ್ರನೆ ।
ನಿಜಮತಿಯ ಎನಗಿತ್ತು ರಕ್ಷಿಸು । ಭಜಿಸಿ ಬೇಡುವೆ ನಿನ್ನನೆ ॥

ಅಜಸುರಾದಿಗಳಿಂದ ವಂದ್ಯನೆ । ಸುಜನರಿಷ್ಟ ಪ್ರದಾತನೆ ।
ಭಜನಲೋಲನೆ ಭವ್ಯತೇಜನೆ । ಕುಜನ ದರ್ಪ ವಿನಾಶನೆ ॥ 1 ॥

ಮೂರು ಲೋಕವ ಚರಿಸಿ ವಿಘ್ನವ । ದೂರ ಮಾಡುತ ಕಾಯ್ವನೆ ।
ಸೇರಿದೆನು ಚರಣಾರವಿಂದವ । ತೋರೆನಗೆ ಸದ್ಭಾವನೆ ॥

ಘೋರತರ ಸಂಸಾರ ಶರಧಿಯ । ತೀರ ಸೇರಿಸಿ ಕಾಯ್ವನೆ ।
ಬಾರಿ ಬಾರಿಗು ನಮಿಸಿ ಬೇಡುವೆ । ಧೀರ ಶ್ರೀ ಗುರು ಗಣಪನೆ ॥ 2 ॥

ಅಂತವಿಲ್ಲದನಂತ ಮಹಿಮನೆ । ಎಂತು ವರ್ಣಿಪೆ ನಿನ್ನನು ।
ಭ್ರಾಂತಳಾದೆನು ಸುಖದ ಆಸೆಗೆ । ಶಾಂತತೆಯ ನಾ ಕಾಣೆನು ॥

ಅಂತರಂಗವ ಶುದ್ಧಗೊಳಿಸೊ । ವೇದಾಂತ ವೇದ್ಯನೆ ಬೇಡ್ವೆನು ।
ದಂತಿವದನನೆ ದಯದಿ ಮನಸಿನ । ಚಂಚಲವ ಬಿಡಿಸೆಂಬೆನು ॥ 3 ॥

## 3.2 ಗಣಪತಿ ಭಜನೆ

ನಮೋ ಗಣಪತಿ ಪಾವನ ಮೂರ್ತಿ ॥ ಅಮಿತ ಸುಕೀರ್ತಿ ಅಮರ ಜ್ಯೋತಿ ॥ ಪ ॥

ಪಾಪ ಪರಿಹಾರ । ತಾಪ ವಿದೂರ । ಆಪದ್ಬಾಂಧವ ಕಾಪಾಡುವವ ॥ 1 ॥

ಸುಂದರ ಕಾಯ । ಸೊಂಡಿಲು ರಾಯ । ಬಂದಿಹ ಭವ ಭಯ ಬಂಧ ಬಿಡಿಸುವ ॥ 2 ॥

ಕಲಿಮಲ ನಾಶ । ಚೆಲುವ ವಿಘ್ನೇಶ । ಇಳೆಯೊಳುತ್ತಮ ಶಾಲ್ಮಲಿಯಲಿ ವಾಸ ॥ 3 ॥

ಹಿಂಗದೆ ಭಜಿಪರ । ಇಂಗಿತವೀವ । ಕಂಗೊಳಿಸುವ ಸೌಮಂಗಲವೀವ ॥ 4 ॥

ಮಹಾಗಣೇಶ । ಮಹಿಮವಿಶೇಷ । ಇಳೆಯೊಳುತ್ತಮ ಶಾಲ್ಮಲಿ ನದಿ ವಾಸ ॥ 5 ॥

## 3.3 ಗಣಪತಿ ವಂದನೆ

ವಂದಿಸುವೆ ಮುದದಿಂದಲಿ ಉಮಾ । ನಂದನನೆ ಪಾಲಿಸು ಸುಮ ॥

ನಂದಿವಾಹನ ಕಂದನೆ ಆ । ನಂದರೂಪ ದಯಾಘನ ॥ ಪ ॥

ನಿನ್ನೆಯಾ ವಿಲಾಸವಿದು । ಜಗವನ್ನು ಆಡಿಸುತಿರ್ಪುದು ॥

ನಿನ್ನನಾರಾಧಿಸುವ । ಭಜಕರಿಗುನ್ನತದ ಸುಖ ತೋರ್ಪುದು ॥ 1 ॥

ನಾನು ನೀನೆಂತೆಂಬ ಹಂಕೃತಿ । ಹೀನ ಗುಣಗಳ ಛೇಧಿಸು ॥

ಮಾನ ನಿಧಿ ತವ ಸೇವೆಗೆ । ಸುಜ್ಞಾನ ಪುಷ್ಪವ ಕರುಣಿಸು ॥ 2 ॥

ಯಜ್ಞದೊಳು ದಕ್ಷ್ಯಜ್ಞ ಕೆಡಿಸಿಹ । ಆಜ್ಞೆಯಲಿ ಮೆರೆವಾತನೆ ॥

ಅಜ್ಞರಿಗೆ ಪ್ರಜ್ಞೆಯನೆ ಹೊಂದಿಸಿ । ಸುಜ್ಞಾನ ಈವ ಸರ್ವಜ್ಞನೆ ॥ 3 ॥

ಅಂಡಜವಾಹನ ಸಖನೆ ನಿನ್ನ । ಕಂಡು ಧನ್ಯಳಾದೆನು ॥

ಮುಂಡಿಗೇಸರವೆಂಬ ನಾಡೊಳಾಖಂಡ । ಕೀರ್ತಿಯೊಳ್ಮೆರೆವನೆ ॥ 4 ॥

## 3.4 ಗಣಪತಿ ಬಂದಿದ್ದು

ಬಂದನೆ ಮಹಗಣಪತಿಯು । ಚಂದದಿ ಮಹಾ ಚೌತಿಯೊಳು ॥ ಪ ॥

ಮಂದಹಾಸದಿ ನಲಿ ನಲಿದು । ತಂದೆಯೊ ವರಗಳ ಕೊಡಲು ॥ ಅ.ಪ ॥

ಶಂಭು ಕುಮಾರಕ ಎನಿಸಿ । ಶಾಂಭವಿಗತಿ ಪ್ರಿಯನೆನಿಸಿ ।

ಸಂಭ್ರಮದಿ ಗಜಮುಖ ಧರಿಸಿ । ನಂಬಿದ ಜನರೊಳು ನೆಲೆಸಿ ॥ 1 ॥

ಅತಿ ಶ್ರೇಷ್ಠ ಭಾದ್ರಪದದೊಳು । ಅತಿ ಹಿತದಿ ಶುದ್ಧ ಚೌತಿಯೊಳು ।

ಅತಿಶಯದಿ ಪೂಜೆಯ ಗೊಳಲು । ಗಣ । ಪತಿ ಬಂದ ಸಂಭ್ರಮದೊಳು ॥ 2 ॥

ಮೂಷಿಕ ವಾಹನವೇರಿ । ಪಾಶಾಂಕುಶವ ತಾ ಧರಿಸಿ ।

ಶೇಷವಿಭೂಷಣನಾಗಿ । ಈಶ ಸುತನು ಮುದತಾಳಿ ॥ 3 ॥

## 3.5 ಗಣಪತಿ ಪೂಜೆ

ನಿಂತು ನೋಡುವ ಬನ್ನಿ ಸಂತಸದಿಂದಲಿ ॥ ಪ ॥

ಶುಚಿ ಅಂತರಂಗದಿ । ದಂತಿಮುಖನ ಪೂಜೆಯ ॥ ಅ.ಪ ॥

ಮೂಷಿಕವಾಹನನ । ಮೋದಕ ಪ್ರಿಯನ । ದೇಶದೊಳಗೆ ಬಹು ಕೀರ್ತಿಪನ ॥
ಈಶಕುಮಾರನ । ಸಾಸಿರನಾಮನ । ಸಂಪ್ರೀತಿಯಿಂದಲಿ ಪೂಜಿಸುವರಿಲ್ಲಿ ॥ 1 ॥

ಗಂಗಾಜಲದೊಳಗಭಿಷೇಕವ ಮಾಡುತ । ಗಂಧ ಚಂದನಗಳ ಅರ್ಪಿಸುತ ॥
ತಂಡ ತಂಡದಲಿ ನೈವೇದ್ಯಕೆ ತಂದಿಡುತ । ಸಿಂಧೂರಕ್ಷತೆಯಿಂದರ್ಚಿಸುವರಿಲ್ಲಿ ॥ 2 ॥

ಆನೆಯ ಮುಖದವನ । ಅಂಬಿಕೆ ಕುವರನ । ನಾಗಾಭರಣವ ಧರಿಸಿಹನ ॥
ನಾಗಸಂಪಿಗೆ ಕುಸುಮಗಳ ಸಮರ್ಪಿಸಿ । ಪ್ರೇಮದಿಂದಲಿ ಪೂಜಿಸುವರಿಲ್ಲಿ ॥ 3 ॥

## 3.6 ಸತ್ಯಗಣಪತಿ ಪೂಜೆ

ಸತ್ಯಗಣಪತಿ ಪಾದಕಮಲಕ್ಕೆರಗಿ । ಒಳ್ಳೆ ಭಾವ ಭಕ್ತಿಯೊಳು ಪೂಜಿಸುವೆ ॥
ಭಕ್ತ ವತ್ಸಲ ನಿನ್ನ । ಮಹಿಮೆಯ ಪೊಗಳುವೆ । ಸಿದ್ದೆಳ್ಳು ಕಡಲೆಯ ನಿನಗೆ
ತಂದಿಡುವರೊ । ಶೀಘ್ರದಲಿ ಮತಿಯ ಕರುಣಿಸು ॥ 1 ॥

ಶರಣು ಗಜಾನನ । ಶರಣು ವಿಘ್ನೇಶನೆ । ಪರಿಪೂರ್ಣ ಮನದಿ ಪೂಜಿಸುವೆ ।
ಮಂಗಳ ಮಹಿಮನೆ । ಮಂಗಳಕ್ಷತೆಗಳ ತಂದು । ನಿನ್ನೆಯಚರಣಕ್ಕರ್ಚಿಸಿ ಬೇಡುವೆ ।
ಮಂದಾರದ ಹೂವಾ ಕರುಣಿಸು ॥ 2 ॥

ಸಂಜೆ ಸಮಯವ ನೋಡಿ । ತಿಂಗಳು ಮರೆಮಾಡಿ । ಕಂದನು ನೀನಾಗೆ ಬಂದೆ ।
ಅನುದಿನ ನಿನ್ನಯ ಮಹಿಮೆಯ ಪೊಗಳುವೆ । ವರದ ಗಣಪತಿ ನಿನ್ನ
ಚರಣದೊಳಿರುವಂಥ । ಕರವೀರದ ಹೂವ ದಯಮಾಡು ॥ 3 ॥

ಮಾತೆಯ ವಚನವ ಪ್ರೀತಿಯಿಂದಲೆ ಪಡೆದೆ । ಪಿತನ ಬಾಗಿಲೊಳು ನೀ ತಡೆದೆ ।
ಲೋಕದೊಳಗೆ ಆದಿ ಪೂಜೆಯ ಪಡೆದು ನೀ । ಆಕು ವಾಹನ ನಿನ್ನ ಶಿರದ
ಮೇಲಿರುವಂಥ । ಅತ್ತರ ಮಲ್ಲಿಗೆಯ ದಯಮಾಡು ॥ 4 ॥

ರಕ್ತ ವರ್ಣಾಂಬರ । ಭಕ್ತಿ ಮುಕ್ತಿಯ ನೀಡು । ಭಕ್ತರ ಅನುದಿನ ಸಲಹು । ಭಕ್ತ ವತ್ಸಲ ನೀನು । ತಪ್ಪದೆ ದಯಮಾಡು । ರಕ್ತ ವರ್ಣನೆ ನಿನ್ನ ಮುಡಿಯ ಮೇಲಿರುವಂಥ । ದುಂಡು ಮಲ್ಲಿಗೆಯ ದಯಮಾಡು ॥ 5 ॥

ಧರೆಯೊಳಧಿಕವಾದ ಇಡುಗುಂಜಿ ಪುರದೊಳು । ದೃಢವಾಗಿ ನೀನು ನೆಲೆಸಿರುವೆ । ಸರ್ವ ಭಕ್ತರ ಮನ । ದಿಷ್ಟವ ಸಲಿಸುವ । ವರದ ಗಣಪತಿ ನಿನ್ನ ಚರಣದೊಳಿರುವಂಥ । ಎಸಳು ದೂರುವೆಯ ದಯಮಾಡು ॥ 6 ॥

## 3.7 ಗಣಪತಿ ಪೂಜೆ

ಬಾರೋ ವಿನಾಯಕನೆ । ನಿನ್ನ । ಪೂಜಿಪೆ ಗೌರೀಸುತನೆ ॥ ಪ ॥ ಬಾರೊ ಬಾರೊ ಇಡಗುಂಜಿ ಪುರವಾಸನೆ । ಸಾರೀ ಬೇಡುವೆ ನಮ್ಮ ಪೂಜೆ ಸ್ವೀಕರಿಸೊ ನೀ ॥ ಅ.ಪ ॥

ಸೇರಿದ ಭಕ್ತ ಜನರು । ನಿನ್ನನು । ಸಾರೀ ಪೊಗಳುತಿಹರು । ಭಾರೀ ವೈಭವದಿ ನಮ್ಮೂರಿಗೆ ಕರೆವೆವು । ಚಾರು ತರದ ಪಾಲಕಿಯ ಏರಿ ನೀ ॥ 1 ॥

ತಂದೆವು ಬಹು ವಿಧದ । ಸುಮವನು । ಗಂಧಚಂದನಗಳನು । ಚಂದದಿಂದಲಿ ಪಾದ ದ್ವಯದೊಳಗಿರಿಸುವೆ । ಎಂದೂ ಕುಂದದ ಚಿರ ಆನಂದ ನೀಡುತ ॥ 2 ॥

ಕರುಣಸಾಗರ ನಿನಗೆ । ಬಡಿಸಿಹೆ । ಪರಿಪರಿ ಭಕ್ಷ್ಯದಡಿಗೆ । ಹರುಷದಿಂದದಲಿ ನಿನ್ನ ಸ್ಮರಿಸುತ್ತ ಕರೆವೆವು । ಕರಿ ಮುಖನೆ ನಮ್ಮ ಮೊರೆಯ ನೀ ಆಲಿಸಿ ॥ 3 ॥

ಆರತಿ ಬೆಳಗುವೆವು । ನಿನ್ನಯ ಕೀರುತಿ ಪೊಗಳುವೆವು । ಪಾರ್ವತಿ ಸುತ ಮಂಗಲ ಮೂರುತಿಯೆ ನಿನ । ಗಾರತಿ ಬೆಳಗುತ್ತ ಅರ್ತಿಯೊಳ್ ನಮಿಪೆವು ॥ 4 ॥

## 3.8 ಗಣಪತಿ ಪೂಜೆ

ಮಂಗಲಾಕ್ಷತೆ ತನ್ನಿ । ಗಿಂಡಿಯಲುದಕವ ತನ್ನಿ । ತೆಂಗಿನಕಾಯ ತೆಗ ತನ್ನಿ । ತೆಗತನ್ನಿರೆನುತಾಲೆ । ಬ್ರಾಹ್ಮಣರು ನಗುತಾ ನುಡಿದಾರೆ ॥ ಪ ॥

ಹೂವು ಅಕ್ಷತೆ ತನ್ನಿ । ಹೂಜಿಯಲುದುಕವ ತನ್ನಿ । ಬಾಳೆಯ ಹಣ್ಣ ತೆಗ ತನ್ನಿ । ತೆಗತನ್ನಿರೆನುತಾಲೆ । ಗಣಪತಿಯ ಪೂಜೆ ತೊಡಗಿದ ॥ ಅ.ಪ ॥

ಉದ್ದಿನ ಬೇಳೆ ಮೇಲೆ । ಇದ್ದವೆ ಮೂರಕ್ಷರ । ಮುದ್ರೆಯುಂಗುರವೇ ಹೊಳೆಯುತ್ತ ।
ಹೊಳೆಯುತ್ತ ಅಣ್ಣಯ್ಯ । ಗಣಪತಿಯ ಪೂಜೆ ತೊಡಗಿದ ॥ 1 ॥

ಹೆಸರಿನ ಬೇಳೆಯ ಮೇಲೆ । ಎಸೆದವೆ ಮೂರಕ್ಷರ । ಹರಳಿನುಂಗುರವೇ ಹೊಳೆಯುತ್ತ ।
ಹೊಳೆಯುತ್ತ ಅಪ್ಪಯ್ಯ । ಗಣಪತಿಯ ಪೂಜೆ ತೊಡಗಿದ ॥ 2 ॥

ಪಟ್ಟೆ ಹೊಚ್ಚಡನೊದ್ದು । ಮುತ್ತಿನ ಬಾಶಿಗ ಮುಡಿದು । ಮಿತ್ರೆಯನು ತನ್ನ
ಬಲದಲ್ಲಿ । ಬಲದಲಿ ಕೂರಿಸಿಕೊಂಡು । ಗಣಪತಿಯ ಪೂಜೆ ತೊಡಗಿದ ॥ 3 ॥

ಹಾಲಿನೂಚ್ಚಡ ಹೊದ್ದು। ನೀಲದುಂಗುರವಿಟ್ಟು। ನಾರಿಯನು ತನ್ನ ಬಲದಲ್ಲಿ ।
ಬಲದಲಿ ಕೂರಿಸಿಕೊಂಡು । ಗಣಪತಿಯ ಪೂಜೆ ತೊಡಗಿದ ॥ 4 ॥

ಗಣಪತಿಯ ಪೂಜಿಸಿದ । ಗಣಪತಿಯ ಅರ್ಚಿಸಿದ । ಗಣಪತಿಗೆ ಕಾಯ ಒಡೆಸಿದ ।
ಒಡೆಸಿದ ತಮ್ಮಯ್ಯ । ಗಣಪತಿಗೆ ಕ್ರಿಯಾ ಮುಗಿದನೆ ॥ 5 ॥

## 3.9 ಗಣಪತಿಗೆ ನೈವೇದ್ಯ

ಮಾಡೋ ಭೋಜನ ಮೋದದಿ । ಶ್ರೀ ಗೌರಿ ಕುಮಾರ ॥ ಪ ॥
ಮಾಡು ಭೋಜನವನು ರೂಢಿಯೊಳ್ ಭಕ್ತರು ।
ಕೂಡಿ ಆನಂದದಿ ಜೋಡಿಸಿಟ್ಟಿರುವರು ॥ ಅ.ಪ ॥

ಮಿಂಚಿನ ಪೂರ್ಣ ತೇಜವ । ಬೀರುತ್ತಲಿರುವ । ಪಂಚಕಜ್ಜಾಯವೆಲ್ಲವ ॥
ಮುಂಚಿತವಾಗಿಯೆ ಮುಂದಕೆ ಇಟ್ಟಿಹೆ । ಪಂಚಮುಖನ ಸುತ ಸಂತಸದಿಂದಲಿ ॥ 1 ॥

ಆದಿ ಪೂಜೆಯ ಗೊಳ್ಳುತ । ಭಕ್ತರೊಳು ಇರುವ ವ್ಯಾಧಿಯ ನಾಶ ಮಾಡುತ ॥
ಮೋದದಿಂದಲೆ ನಿನ್ನೆಯ ಮುಂದೀಗಲೆ । ಮೋದಕ ಇಟ್ಟಿಹೆ ಆದರದಲಿ ನೀ ॥ 2 ॥

ಕರಜೀಕಾಯಿಯು ಚಕ್ಕುಲಿ । ಸುಟ್ಟೇವು ಮತ್ತೆ । ಕರಿದಂಬೋಡೆಯ ಬೇಗದಿ ॥
ತರತರದಲಿ ತಂದಿರಿಸಿ ಕಜ್ಜಾಯವ । ಪರಿಪರಿಯಿಂದಲಿ ಪರೀಕ್ಷಿಸಿ ನೋಡುತ ॥ 3 ॥

## 3.10 ಗಣಪತಿಗೆ ಆರತಿ

ಆರತಿ ಬೆಳಗುವೆ ನಾ । ಗಜಾನನ । ಶಿರ ಬಾಗಿ ಮಣಿಯುವೆ ನಾ ॥ ಪ ॥
ಏಕದಂತ ಗಣನಾಯಕ ದೇವಾ । ಸಕಲ ಇಷ್ಟಾರ್ಥವ ಪೂರೈಪ ಸುಮುಖಗೆ ॥ ಅ.ಪ ॥

ಸಿದ್ಧಿ ಬುದ್ಧಿಯ ಪ್ರಿಯನು । ಅಲ್ಲದೆ । ಮುದ್ದು ಗೌರಿಯ ಸುತನು ।
ಅಂಧಃಕಾರದಿ ನಿನ್ನ ಮರೆವ ಭಕ್ತರಿಗೆ । ಶ್ರದ್ಧೆಯೊಳ್ ಭಜಿಸಲು ಮನ ಕರುಣಿಸೆಂದು ॥ 1 ॥

ಭಕ್ತರ ಕಷ್ಟಗಳ । ನೀನು । ಯುಕ್ತಿಯಿಂದಲಿ ಹರಿಸೊ ।
ಶಕ್ತಿವಂತರ ಈ ದುಗುಡಗಳೆಲ್ಲವ । ಮುಕ್ತಗೊಳ್ಳಲು ನೀ ಶುಭವ ಕೋರೆಂದು ॥ 2 ॥

ಧೂಪ ದೀಪಾರತಿಯಾ । ಬೆಳಗುವೆ । ಒಪ್ಪದಿ ಸ್ವೀಕರಿಸೊ ।
ಅಪ್ಪುತಪ್ಪಿಹ ನಮ್ಮ ಕಾರ್ಯಗಳೆಲ್ಲವ । ತಪ್ಪದೆ ಮನ್ನಿಸಿ ಸಲಹೊ ವಿನಾಯಕ ॥ 3 ॥

## 3.11 ಗಣಪತಿಯಲ್ಲಿ ಪ್ರಸಾದ ಬೇಡಿದ್ದು

ಕೊಡಿಸೊ ಪ್ರಸಾದವನು । ಸರ್ವರಿಗು ನೀ । ಕೊಡಿಸೊ ಪ್ರಸಾದವನು ॥ ಪ ॥
ಕೊಡಿಸೊ ಪ್ರಸಾದವ । ಮುಡಿಯ ಮೇಲಿರುವಂಥ ।
ನಾಗಸಂಪಿಗೆ ದೂರ್ವೆ ಕಟ್ಟಿನ ಸರಗಳ ॥ ಅ.ಪ ॥

ಕಾಶಿ ಗೋಕರ್ಣದೊಳು । ನೆಲೆಸಿರುವೆ ನೀ ಈಶ್ವರನ ಪುತ್ರನಾಗಿ ॥
ದೇಶದೇಶೊದೆಳೆಲ್ಲ । ಬಹುಜನರ ಕೈಯಿಂದ ।
ಮೊದಲು ಪೂಜೆಯಗೊಂಬ ಮಹಗಣಪತಿಯೆ ನೀ ॥ 1 ॥

ಕಾಲಿಗೆ ಗಜ್ಜೆಯಿಟ್ಟು । ನಡುವಿಗೆ ಒಳ್ಳೆ ಉರುಗನ ಸುತ್ತಿಕೊಂಡು ॥ರಸದಾಳಿ ಕಬ್ಬನು । ಎಸೆವ ಸೊಂಡಿಲೊಳಿಟ್ಟು । ಹಸನಾಗಿ ಮೆಲ್ಲುತ್ತಿರುವ । ಪಶುಪತಿ ಸುತನೆ ನೀ ॥ 2 ॥

ಇಡುಗುಂಜಿ ಪುರದೊಳಗೆ । ಮಹಗಣಪತಿಯೆ । ದೃಢವಾಗಿ ನೆಲೆಸಿರುವೆ ॥ದೇಹಿ ಎನ್ನುತ ಬಂದು । ಬೇಡಿಕೊಂಬವರಿಗೆ । ಇಷ್ಟಾರ್ಥ ಸಿದ್ಧಿಯ । ಕೊಟ್ಟು ರಕ್ಷಿಪ ದೇವ ॥ 3 ॥

## 3.12 ಗಣಪತಿಯಲ್ಲಿ ಹೂ ಬೇಡಿದ್ದು

ದೀನನಾಥನೆ । ಜ್ಞಾನಪುಷ್ಪವಾ ನೀಡು ॥ ಪ ॥

ಸಾನುರಾಗದಿ ನಿನ್ನ ।  ಧ್ಯಾನವನ್ನು ನೀಡು ಕರುಣದಿ ॥ ಅ.ಪ ॥

ಆದಿಪೂಜ್ಯನೆ । ಮೋದಕಪ್ರಿಯನೆ । ಆದಿಪೂಜ್ಯನೆ ।

ಪಾದಸೇವೆಯ ಇತ್ತು । ಮೋದದಿಂದ ಪೊರೆಯೊ ನಮ್ಮನು ॥ 1 ॥

ವಿಶ್ವ ಜನಕನೆ । ವಿಶ್ವಧಾರನೆ । ವಿಶ್ವ ಜನಕನೆ ।

ವಿಶ್ವಪಾಲನೆ ವಿಶ್ವಂಭರ ವಿಶ್ವೇಶ ಪೂಜ್ಯನೆ ॥ 2 ॥

ನೀಡು ವಿದ್ಯೆಯಾ । ನೀಡು ಬುದ್ಧಿಯಾ । ನೀಡು ವಿದ್ಯೆಯಾ ।

ನೀಡು ಸಿದ್ಧಿಯಾ। ಜೋಡಿಸಿ ಕರವ ಬೇಡುವೆನು ಮತಿಯಾ ॥ 3 ॥

ಚೈತ್ರ ಶುದ್ಧ ಚತುರ್ಥಿ ಉದ್ವದಿ ॥

ರಥದಿ ಕುಳಿತು ನೀ । ಅತಿಶಯ ಸುಖವ ತೋರುವೆ ॥ 4 ॥

## 3.13 ಗಣಪತಿಯಲ್ಲಿ ಹೂ ಬೇಡಿದ್ದು

ಬಾ ಸುಮಧುರ ನಯನಾ । ಪ್ರಸಾದವ । ಕರುಣಿಸೊ ಗಜವದನಾ ॥ ಪ ॥

ಚರಣದಾಸಿ । ಕರವ ಜೋಡಿಸಿ । ಬೇಡುವೆ ನಾ ನಮಿಸಿ ॥ ಅ.ಪ ॥

ಮೂಷಿಕ ವಾಹನ । ಮೋದಕ ಹಸ್ತ । ಆಶಾಭಾವದಿ ಬೇಡುವೆ ಜೀಯಾ ।

ಶೇಷಶಯನ ಪ್ರೀಯಾ ॥ 1 ॥

ರಕ್ತವರ್ಣ ಚಂದನ ಲೇಪಿತ । ಭಕ್ತ ಭೀರು । ಪೊರೆ ಲಂಬೋದರ ।

ಮುಕ್ತಿಯ ನೀ ನೀಡೋ ॥ 2 ॥

## 3.14 ಗಣಪತಿಯಲ್ಲಿ ಹೂ ಬೇಡಿದ್ದು

ನೀಡು ಸುಮವನು ದೇವನೆ । ದಯ । ಮಾಡು ಸತ್ಯ ಗಣೇಶನೆ ॥ ಪ ॥

ಜೋಡಿಸುವೆನು ನಾ ಕರವನೆ । ಇಡ । ಗುಂಜಿ ಕ್ಷೇತ್ರ ನಿವಾಸನೆ ॥ ಅ.ಪ ॥

ಪರಮ ಪಾವನ ನಿನ್ನಯಾ । ಚರಣ ಕಮಲಕೆ ಎರಗುತಾ ।

ಸ್ಥಿರ ಮನದಿ ನಾ ಬೇಡುವೆ । ಕರುಣಿಸೈ ಸೌಭಾಗ್ಯವಾ ॥ 1 ॥

ಸೃಷ್ಟಿ ಗೀಶನ ಕುವರನೆ । ಸೃಷ್ಟಿ ಜನ ಪರಿ ಪಾಲನೆ ।
ಶ್ರೇಷ್ಠ ಪಾದವ ಭಜಿಸುವೆ । ಅಷ್ಟ ಭಾಗ್ಯವ ಕರುಣಿಸೊ ॥ 2 ॥

ಸಿದ್ಧಿ ಬುದ್ಧಿಯ ಕಾಂತನೆ । ಸಿದ್ಧ ಸುರವರ ವಂದ್ಯನೆ ।
ಬುದ್ಧಿದಾತನೆ ಬೇಡುವೆ । ವಿದ್ಯ ಬುದ್ಧಿಯ ಕರುಣಿಸೊ ॥ 3 ॥

## 3.15 ಗಣಪತಿಯಲ್ಲಿ ವರ ಬೇಡಿದ್ದು

ಕರುಣಿಸೆನಗೆ ವರವಾ । ದೇವಾ ॥ ಕರುಣಿಸು ದೇವ । ಕರುಣ ಸಂಜೀವ ।
ನಿರುತವು ನಿನ್ನೊಳು ಬೆರೆಯುವ ತೆರವ ॥ ಪ ॥

ಹಸ್ತದಿ ಗೌರಿ । ಪಡೆದಳು ನಿನ್ನ । ಹಸ್ತಿಮುಖ ಎಂದೇ ಕರೆವಳು ಮುನ್ನ ॥
ಮಸ್ತಕದಲಿ ರಂಜಿಪ ನಾಮವೆ ಚಂದನ । ಶಿಸ್ತಿನಿಂ ರಂಜಿಪನೆ ॥ 1 ॥

ಕರುಣಾಕರನೆ । ದುರಿತ ಸಂಹರನೆ । ಶಿರದೊಳು ರತ್ನ ಕಿರೀಟ ಶೋಭಿಪನೆ ॥
ಶರಣರ ಕುಲ ಉದ್ಧರಿಸ್ವೈ ನೀನೆ । ಶರಣು ಬಂದೆನು ನಾನೆ ॥ 2 ॥

ಸರ್ವಾರಂಭನೆ । ಶರ್ವಾಣಿ ಸುತನೆ । ದೂರ್ವಾದಿಗಳಿಂ ಪೂಜೆ ಗೊಂಬವನೆ ॥
ಸರ್ವ ಕಾರ್ಯಕು ಮೇಲಾಗಿ ನಿಂದವನೆ । ಸರ್ವಜ್ಞನು ನೀನೆ ॥ 3 ॥

## 3.16 ಗಣಪತಿ ಪರ

ಆದಿ ಮೂರುತಿ ನಿನ್ನಾರಾಧಿಪೆ ॥ ವಿಘ್ನ ವಿದೂರ ಸದಾ ವಂದಿಪೆ ॥ ಪ ॥

ಮೂಷಿಕ ವಾಹನ ಹೇ ಗಣಪತಿ । ಶೇಷ ವಿಭೂಷನೆ ನೀಡ್ವೈ ಮತಿ ।
ಭಕ್ತ ಜನರಿಗೆ ನೀ ನೀಡೋ ಮುಕ್ತಿ ॥ 1 ॥

ಪಾವನ ಚರಣ ಸಿದ್ಧಿವಿನಾಯಕ ।ಜೀವ ಕೋಟಿಗಳ ರಕ್ಷಾದಾಯಕ ।
ದೇವರ ದೇವ ವಿದ್ಯಾದಾಯಕ ॥ 2 ॥

ಲಂಬೋದರನೆ ನಂಬಿದೆ ನಿನ್ನನು । ಬೆಂಬಿಡದನುದಿನ ಕಾಯೋ ನೀನು ।
ಕುಂಭಿನಿಗೊಡೆಯ ನಿನ್ನ ನಂಬಿದೆ ॥ 3 ॥

## 3.17 ಗಣಪತಿ ಪರ

ವಂದಿಸುವೆ ಆದಿಯಲ್ಲಿ ಗಣನಾಥನಾ ॥ ಬಂದ ಭವ ಬಿಡಿಸೋ ಶಿವ ನಂದನಾ ॥ ಪ ॥

ಗಿರಿಪುರ ವಾಸಾ ಮೆರೆಸೊ ನಮ್ಮಿರವ ॥ ಶರಣರ ಕಾಯ್ವಾ ಸರಸ ಸ್ವಭಾವಾ ॥ 1 ॥

ಮುನಿಜನ ಪಾಲಕ ಹೇ ಲಂಬೋದರ ॥ ಲಂಬೋದರ ನೀ ನೀಡ್ವೈ ದೇವಾ ॥ 2 ॥

ಗಂಗಾಧರ ಸುತ ಮಂಗಲದಾತಾ ॥ ಮಂಗಲವೀಯ್ಯೆ ಕಾಯ್ಯೆ ದಾತಾ ॥ 3 ॥

## 3.18 ಗಣಪತಿ ವಂದನೆ

ಶಿವ ಪಾರ್ವತಿ ನಂದನ ಏಕದಂತಾ । ಶ್ರೀ ವಿಘ್ನೇಶ್ವರ ॥ ಪ ॥

ನಿಜ ಭಾದ್ರಪದ ಶುದ್ಧವಾದ ಚೌತಿ ದಿನದೊಳು ।
ನಿಜ ಭಕ್ತರಿಂದ ಪೂಜೆಯ ಕೈಗೊಳ್ಳಲೂ ಮುದದೊಳು ॥ 1 ॥

ಅಂದದಿ ಪಡೆದ ಆನೆಯ ಮುಖದ ಆದಿ ಪೂಜ್ಯನೆ ।
ಮೋದಕ ಸಲಿಸುವೆ ಪ್ರಿಯನೆ ಗಣಕೆ ರಾಜನೆ ॥ 2 ॥

ಸಿದ್ಧಿ ಬುದ್ಧಿಯರ ಮುದ್ದಿನ ಕಾಂತಾ ಮುದ್ದು ಗಣಪನೆ ।
ಚಂದನ ಲೇಪಿತ ಕಂದರ ಸಲಹೊ ಶೀ ವಿಘ್ನೇಶ್ವರ ॥ 3 ॥

## 3.19 ಗಣೇಶ ಸ್ತುತಿ

ಫಲದಾಯಕ ನೀನೆ । ವಿನಾಯಕ ॥ ಪ ॥ ನೀ ಫಲದಾಯಕ ನೀನೆ । ವಿನಾಯಕ ॥ ಅ.ಪ ॥

ಭಜನಾರಂಭದಿ । ಭಜಿಸುವೆ ನಿನ್ನನು । ಭಜನೆ ಸಿದ್ಧಿಪುದೆಮಗೆ । ವಿನಾಯಕ ॥ 1 ॥

ಕಾರ್ಯಾರಂಭದಿ । ಭಜಿಸುವೆ ನಿನ್ನನು । ಕಾರ್ಯ ಸಿದ್ಧಿಪುದೆಮಗೆ । ವಿನಾಯಕ ॥ 2 ॥

ವಿದ್ಯಾರಂಭದಿ । ಭಜಿಸುವೆ ನಿನ್ನನು । ವಿದ್ಯೆ ಸಿದ್ಧಿಪುದೆಮಗೆ । ವಿನಾಯಕ ॥ 3 ॥

## 3.20 ಗಣೇಶ ಸ್ತುತಿ

ನಮಿಸುವೆ ದೇವಾ ಶರಣರ ಕಾಯ್ವಾ ॥
ದೇವನೆ ಗಣರಾಯಾ । ದಯಾಮಯ । ದೇವನೆ ಗಣರಾಯಾ ॥ ಪ ॥

ಗಜಚರ್ಮಾಂಬರ ಧರ ಶಿವ ತನಯಾ ॥ ಸುಜನರ ಪಾಲಕ ಭಜಿಸುವೆ ಅನುದಿನ ॥ 1 ॥

ಚಂದಿರ ನಗಲು ಶಾಪವನಿತ್ತೆ ॥ ಚಂದದಿ ಉದರಕೆ ಉರಗನ ಬಿಗಿದೆ ॥ 2 ॥

ಪಾರ್ವತಿ ಪುತ್ರನೆ ಗರ್ವ ರಹಿತನೆ ॥ ಸರ್ವ ಕಾರ್ಯದೊಳ್ ನಿರ್ವಿಘ್ನವ ನೀಡುವೆ ॥ 3 ॥

ಆದಿಪೂಜಿತನೆ ಮೋದಕ ಪ್ರಿಯನೆ ॥ ಆದರಿಸೀ ನಿನ್ನ ಮೋದದಿ ವಂದಿಪೆ ॥ 4 ॥

## 3.21 ಗಣೇಶ ಸ್ತುತಿ

ಜಯ ಜಯ ಪಾಹಿ ಜಯತು ಗಣೇಶ ॥ ಪ ॥

ಜಯ ಜಯ ಮಂಗಲಮೂರ್ತಿ ಸರ್ವೇಶ ॥ ಅ.ಪ ॥

ಲಂಬೋದರನೆ ಶಂಭು ಕುಮಾರಾ ॥ ಬೆಂಬಿಡದೆ ನಿನ್ನ ನಂಬಿ ಪಾಡುವೆನಾ ॥ 1 ॥

ಈ ಜಗದಾದಿ ಪೂಜಿತ ನೀನೆ ॥ ಆ ಜಗನ್ಮಾತೆ ಗೌರಿ ಕುವರನೆ ॥ 2 ॥

ವಾಸವಾಗಿಹೆ ಸೀತಾಳಗವಿಯೊಳು ॥ ಸಿದ್ಧಿವಿನಾಯಕನೆಂಬ ನಾಮದೊಳು ॥ 3 ॥

## 3.22 ಗಣೇಶ ಸ್ತುತಿ

ಬಂದನೀಗ ಗೌರಿಮಗ । ಮುದ್ದು ಗಣೇಶ ॥ ವಂದಿಪೆವು ಭಕ್ತಿಯಲಿ ಬಾರೋ ಗಣೇಶ ॥ ಪ ॥

ನಮ್ಮ ವಿಘ್ನೇಶ ಬಾರೋ ಗಣೇಶ ॥

ಒಪ್ಪಿಸುತ್ತ ಇಪ್ಪತ್ತೊಂದು ಕಡುಬು ಗಣೇಶ ॥ ವಂದಿಪೆವು ಭಕ್ತಿಯಲಿ ಬಾರೋ ಗಣೇಶ ॥ 1 ॥

ನಮ್ಮ ವಿಘ್ನೇಶ ಬಾರೋ ಗಣೇಶ ॥ ಆನೆ ಮುಖ ಡೊಳ್ಳು ಹೊಟ್ಟೆ ಮುದ್ದು ಗಣೇಶ ॥

ವಂದಿಪೆವು ಭಕ್ತಿಯಲಿ ಬಾರೋ ಗಣೇಶ ॥ 2 ॥

ನಮ್ಮ ವಿಘ್ನೇಶ ಬಾರೋ ಗಣೇಶ ॥

## 3.23 ಗಣೇಶ ಸ್ತುತಿ

ಚಂದ್ರಚೂಡ ನಂದನ । ನಾನಿಂದು ಗೈವೆ ವಂದನ ॥ ಪ ॥

ಬಂದ ಭವದ ಬಂಧನ । ದಿಂದ ಮಾಡು ಮೋಚನ ॥ ಅ.ಪ ॥

ಭೂಮಿ ಅಮರ ಪಾಲನೆ । ನೀ ಸೋಮ ಗರ್ವ ಹಾರನೆ ।
ಕಾಮಾರಿಯ ಕುಮಾರನೆ । ಸ್ವಾಮಿ ಶ್ರೀ ಗಣೇಶನೆ ॥ 1 ॥

ಏಕದಂತ ಮೂರುತಿ । ತ್ರಿಲೋಕ ಭರಿತ ಕೀರುತಿ ।
ಬೇಕೆಂಬುದನೆ ನೀಡುತಿ । ಶೋಕಗಳನೆ ನೀಗುತಿ ॥ 2 ॥

ಪಂಚ ಭಕ್ಷ್ಯ ಪ್ರೀತನೆ । ಪ್ರಪಂಚ ಪೂರ್ಣ ತೋಷನೆ ।
ಪಂಚ ತತ್ವ ಮೂಲನೆ । ಪಂಚ ಭೂತ ಸತ್ವನೆ ॥ 3 ॥

## 3.24 ಗಣಪತಿ ಪರ

ದೇವ ದೇವೋತ್ತ್ಮನೆ । ದೇವ ಗಣರಾಜಾ ।
ಅಖಿಲಾಂಡಕೋಟಿ ಬ್ರಹ್ಮಾಂಡ ನಾಯಕ ನೀನೆ ॥ ಪ ॥

ಆದಿ ಪೂಜಿತ ನೀನೆ । ಆದಿ ವಂದಿತ ನೀನೆ । ಮೇಧಿನಿ ಒಡೆಯ ನೀನೆಂದು ಮೆರೆವವನೆ ।
ಮೋದಕ ಪ್ರಿಯ ನೀನೆ । ಸಾಧು ಜನ ಪೋಷಕನೆ । ಆದರದಿ ನಾ ನಿನ್ನ ।
ಪಾದಾಂಬುಜವ ಬಿಡೆನು ॥ 1 ॥

ಗಜಮುಖನೆ ಶೋಭಿಪನೆ । ಉರಗಭೂಷಣ ನೀನೆ ।
ಅಜಸುರಾಸುರವಂದ್ಯ ತ್ರಿಜಗ ಪಾಲಕ ನೀನೆ । ರಜತಾದ್ರಿವಾಸ ಶ್ರೀ ।
ಪರಮೇಶ್ವರನ ಸುತನೆ । ಅಜಕ ಜನಮನ ಪ್ರಿಯನೆ । ಭಜಿಸಿ ಕೊಂಡಾಡುವೆನು ॥ 2 ॥

ಜನನ ಮರಣಾಂತಕನೆ । ಜನನಿ ಗೌರೀ ಸುತನೆ ।
ಮನುಜ ಜನ್ಮವ ಎನಗೆ ನೀಡಿದವ ನೀನೆ । ಜನುಮ ಜನುಮಾಂತರದ ।
ಭವ ರೋಗ ಕಳೆಯಯ್ಯ । ನಿನ್ನ ಆರಾಧಿಸುವ । ಸನ್ಮಾರ್ಗ ತೋರಯ್ಯ ॥ 3 ॥

ಸಿದ್ಧಿ ಬುದ್ಧಿಯರರಸ । ವಿದ್ಯಾದಾಯಕ ನೀನೆ ।
ಉದ್ಧರಿಸಿ ಸಕಲರನು ತಿದ್ದಿ ಪೊರೆವವ ನೀನೆ । ವಿದ್ಯಾಧಿಪತಿ ನೀನೆ ।
ಮುದ್ದು ಪಾರ್ವತಿ ಸುತನೆ ।ಸದ್ಬುದ್ಧಿ ಸೌಭಾಗ್ಯ । ವರವ ಬೇಡುವೆನಯ್ಯ ॥ 4 ॥

## 3.25 ಗಣಪತಿ ಭಜನೆ

ಜಯತು ಮಂಗಲ ಮೂರ್ತಿ ಗಣಪತಿ । ಹರಸು ಬಾರ್ರೈ ಅನುದಿನ ॥ ಪ ॥
ನಮ್ಮ ಬಾಳಿನ ದಾರಿ ಬೆಳಗಲು । ನೀನು ನೀಡಿದೆ ಚೇತನ ॥ ಅ.ಪ ॥

ಆದಿ ಗಣಪತಿ । ವೇದ ಮೂರುತಿ । ಪರಮ ಪಾವನ ಚರಿತನೆ ।
ಭಕ್ತ ವೃಂದದ ಹೃದಯ ತುಂಬಿದೆ । ಪ್ರಖರ ತೇಜೋ ಭರಿತನೆ ॥ 1 ॥

ಸರ್ವ ಕಾರ್ಯಗಳಲ್ಲಿ ಸುಖವನು । ಬಯಸಿ ನಿನ್ನ ಪೂಜೆಯ ।
ಸಲಿಸಿ ಮೊದಲಿಗೆ ಬೇಡಿಕೊಳ್ವೆವು । ಸೌಖ್ಯ ಸಂಪದ ವೃದ್ಧಿಯ ॥ 2 ॥

## 3.26 ಗಣಪತಿ ಭಜನೆ

ಎರಗುವೆನಾ ಬೇಡುವೆನಾ । ನೀಡು ನೀ ಪುಷ್ಪವ ಗಜವದನ ॥ ಪ ॥

ಭಕ್ತರ ಹೃದಯದಿ ನೆಲೆಸಿಹನೆ । ಮನದಾಭೀಷ್ಟವ ಸಲಿಸುವನೆ ।
ದೀನಳಾಗಿ ನಾ ಬೇಡುವೆ ನಿನ್ನೊಳು । ಕುಂಕುಮ ಭಾಗ್ಯವ ನೀಡೆನಗೆ ॥ 1 ॥

ಗೋಕರ್ಣದೊಳು ನೆಲೆಸಿಹನೆ । ಘೋರ ಪಾಪ ಪರಿಹರಿಸುವನೆ ।
ಪರಿ ಪರಿ ಕಷ್ಟವ ನೀ ಪರಿಹರಿಸಿ । ಪತ್ರೆ ಪುಷ್ಪವಾ ನೀಡೆನಗೆ ॥ 2 ॥

ಮಂಗಲ ನಿತ್ಯ ನಿರಂಜನನೆ । ಮಂಗಲಕರ ಲಂಬೋದರನೆ ।
ಮಂಗಲ ಗೌರಿಯ ಪ್ರೇಮದ ಸುತನೆ । ಮಂಗಲವನು ನೀ ನೀಡೆನಗೆ ॥ 3 ॥

## 3.27 ಗಣಪತಿ ಭಜನೆ

ಓ ಗಜಾನನ ವಿಘ್ನಹರಣ । ಸಕಲ ಕಾರ್ಯಕು ಕಾರಣ ॥ ಪ ॥

ವಂದಿಪೆವು ಮುದದಿಂದಲಿ । ನೀಡು ಧೈರ್ಯವ ಮನದಲಿ ।
ಬಂದ ಎಡರನು ಎದುರಿಪ । ಸ್ಥೈರ್ಯವನು ಕೊಡು ಮುದದಲಿ ॥ 1 ॥

ಸಕಲರಿಂದಲೂ ವಂದ್ಯನೆ । ಸರ್ವರಿಂದಲೂ ಪೂಜ್ಯನೆ ।
ನೀಡು ಕಾರ್ಯಕೆ ಯಶವನೆ । ಗೌರಿ ಪ್ರಿಯ ಶುಭ ವದನನೆ ॥ 2 ॥

ಗಜವದನನೆ ವಿನಾಯಕ । ವಿದ್ಯೆ-ಬುದ್ಧಿ ಪ್ರದಾಯಕ ।
ಸರ್ಪಾಭರಣ ವಿನಾಯಕ । ಸರ್ವಮಂಗಳದಾಯಕ ॥ 3 ॥

## 3.28 ಗಣಪತಿ ಮಂಗಲ

ಮಂಗಲಂ ಜಯ ಜಯ । ಸಿದ್ಧಿವಿನಾಯಕ । ಮಂಗಲಂ ವಿದ್ಯಪ್ರದಾಯಕಾ ॥ ಪ ॥
ಮಂಗಲಮೂರುತಿ । ಪಾಶಾಂಕುಶಧರ । ಗಂಗಾಧರ ಸುತ ।
ಜಯ ಲಂಬೋದರ ॥ ಅ.ಪ ॥

ಈಶ ಸುತನೆ ಜಗದೀಶ ವಂದಿತನೆ । ಮೂಷಿಕವೇರಿಯೆ ನಲಿವವನೆ ॥
ದೇಶದೇಶದೊಳುಲ್ಲಾಸದಿ ಮೆರೆಯುತ । ದಾಸರ ಪೂಜೆಯಗೊಂಬವನೆ ॥ 1 ॥

ವೇದೋಕ್ತದಿ ಬುಧರೆಲ್ಲರು ಕೂಡಿ । ಮೋದದಿ ಆರಾಧನೆ ಗೈದು ॥
ಮೋದಕ ಪಂಚಭಕ್ಷವ ನೈವೇದಿಸಿ । ಆದರದಲಿ ಪಾಡುವರಿಂದು ॥ 2 ॥

ಸರ್ವಜ್ಞನೆ ಶರ್ವಾಣಿಯ ಸುತನೆ । ಸರ್ವ ಕಾರ್ಯಕು ಮೇಲಾಗಿಹನೆ ॥
ಪರಮೋತ್ಸಾಹದಿಂದ ನಿರುತವು ಮೆರೆಯುವ ।
ಹಿರಿದಾದ ಮುಂಡಿಗೇಸರದ ಗಣೇಶನೆ ॥ 3 ॥

ಅಂಬಿಕಾತನಯ ಹೇರಂಭನೆ ತವ ಪಾ । ದಾಂಬುಜಕೆರಗಿ ಬೇಡುವೆ ನಾನು ॥
ನಂಬಿದ ಭಕ್ತರ ಬೆಂಬಿಡದಲೆ । ಭವಾಂಬುಧಿಯನು ದಾಟಿಸು ನೀನು ॥ 4 ॥

## 3.29 ಗಣಪತಿಗೆ ಮಂಗಲ

ಮಂಗಲಂ ಜಯಜಯ ಗಜಮುಖಿಗೆ । ಮಂಗಲಂ ಅಜಹರಿ ವಂದಿತಗೆ ॥
ಮಂಗಲಂ ಸುಜನರ ಇಂಗಿತವೀಯುವ । ಪಂಜಲೋಚನೆ ಉಮಾತನಯನಿಗೆ ॥ ಪ ॥

ಮೂಲಾಧಾರದಿ ನೆಲೆಸಿದಗೆ । ಫಾಲಹರನ ಮೋಹದ ಸುತಗೆ ॥
ಬಾಲ ಭಾಸ್ಕರನ ತೇಜದಿ ಪ್ರಕಾಶಿಪ । ಶೀಲಮೂರುತಿ ಲಂಬೋದರಗೆ ॥ 1 ॥

ಕರಿಯ ವದನ ಕರುಣಾಕರಗೆ । ಉರಗನ ಉದರದಿ ಸುತ್ತಿಹಗೆ ॥
ಕರದಿ ಪಾಶಾಂಕುಶ ಪಿಡಿದು । ದುಷ್ಟರನೆಲ್ಲ ತರಿದು ಭಕ್ತರ ಪರಿಪಾಲಿಪಗೆ ॥ 2 ॥

ಕನಕ ರತ್ನದ ಫಣಿ ಭೂಷಿತಗೆ । ಗಣಗಳಿಗೊಡೆಯ ಎಂದೆನಿಸಿಹಗೆ ॥
ವನದ ಕೇದಿಗೆ ಪುಷ್ಪ ದೂರ್ವಾಲಂಕಾರದಿ । ಮುನಿಜನ ವಂದ್ಯ ಶ್ರೀ ಗಣಪತಿಗೆ ॥ 3 ॥

ಮೂಷಿಕ ಏರಿಯೆ ಮೆರೆವವಗೆ । ಭೂಸುರರಿಂಪೂಜೆ ಗೊಂಬವಗೆ ॥

ಮೋದಕ ಪಂಚಭಕ್ಷವ ಮೆಲ್ಲುವ । ಈಶ ಕುವರ ವಿಘ್ನೇಶನಿಗೆ ॥ 4 ॥

ಸೊಂಡಿಲು ರಾಯ ವಿನಾಯಕಗೆ । ಕುಂಡಲ ಮುಕುಟದಿ ಶೋಭಿತಗೆ ॥

ಕೊಂಡು ಭಕ್ತರ ಕೈಯ ಅರಿಕೆಯ ಮೋದದಿ । ಮುಂಡಿಗೇಸರದೊಳು ವಾಸಿಪಗೆ ॥ 5 ॥

----- ****** -----

# 4 ದೇವಿ

## 4.1 ದೇವಿ ಸ್ತುತಿ

ವಿಜಯ ನೀಡೆ ಮಾತೆ । ಭುಜಗ ಭೂಷಣ ಪ್ರೀತೆ ॥ ಪ ॥

ಭಜಿಸುವೆವು ಗಿರಿಜಾತೆ । ತ್ರಿಜಗ ವಿಖ್ಯಾತೆ ॥ ಅ.ಪ ॥

ಗಿರಿಜೆ ಲಕ್ಷ್ಮಿಯು ನೀನೆ । ವರ ಸರಸ್ವತಿ ನೀನೆ ॥ ಸರ್ವ ಶಕ್ತಿಯು ನೀನೆ ।

ಸ್ಮರಿಸುವೆವು ಚರಣವನೆ ॥ 1 ॥

ಅಂಬೆ ಮೂಕಾಂಬೆಯೆ । ಶಂಭು ಶಂಕರ ಸತಿಯೆ ॥ ನಂಬಿದೆವು ಪರಶಿವೆಯೆ ।

ಅಂಬುಜಾನನೆ ತಾಯೆ ॥ 2 ॥

ವಿದ್ಯಾದಾಯಿನಿಯೆ ಈ । ಮುದ್ದು ಬಾಲಕಿಯರನು ॥ ಉದ್ಧರಿಸಬೇಕಮ್ಮ ।

ರುದ್ರಾಣಿ ಫಣಿವೇಣಿ ॥ 3 ॥

ಇಂದುಧರನ ರಾಣಿ । ಸುಂದರಿ ಮೃದುವಾಣಿ ॥ ವಂದಿಸುವೆ ಗೀರ್ವಾಣಿ ।

ಆನಂದ ಕೊಡು ಶರ್ವಾಣಿ ॥ 4 ॥

ಜೀವನಕೆ ಗಾಯನಕೆ । ಧಣಿ ಎಂದೆನಿಸಿಹಳೆ ॥ ಸಾನುರಾಗದಿ ಬೇಡ್ವೆ ।

ಜ್ಞಾನಪುಷ್ಪವ ನೀಡೆ ॥5॥

## 4.2 ದೇವಿ ಪರ

ದೇವಿ ಪೊರೆಯೆ ಜನನಿ । ಭವಾನಿ । ದೇವಿ ಪೊರೆಯೆ ಜನನಿ ॥ ಪ ॥

ವೀರ ಖೂಳರ ಸಂಹಾರಿಣಿ ಕರುಣಿ ॥ ನಾರಿ ಶಿರೋಮಣಿ । ಪಾಹಿ ಶರ್ವಾಣಿ ॥ 1 ॥

ಸಂತಸದೊಳು ಶ್ರೀಮಂತಿನಿ ಪೊರೆಯ್ಯೆ ॥ ಕಂದುವಿನರಗಿಣಿ । ಎಂಥ ಚೆಲುವೆ ನೀ ॥ 2 ॥

ಪ್ರಭು ಶಂಕರನ ಮೋಹದ ರಾಣಿ ॥ ಅಭಿನಮಿಸುವೆನ್ನೈ । ತ್ರಿಭುವನ ಜನನಿ ॥ 3 ॥

ನಮಿಸುವೆ ತಾಯೆ ಅಮರಳೆ ಮಾಯೆ ॥ ಕ್ಷಮಿಸುತ ವರಗಳ । ಹರುಷದಿ ನೀಡೆ ॥ 4 ॥

## 4.3 ದೇವಿ ಪೂಜೆ

ಪೂಜಿಪೆನಾ ಪೂಗಳಿಂದ । ಪೂರ್ಣಚಂದ್ರ ಮೌಳಿಯಾ ॥ ರಾಜ ರಾಜ ಸಖನ ರಾಣಿ । ರಾಜೀವಾಂಬಿಕೆ ಶಿವೆ ॥ ಪ ॥

ಮಲ್ಲಿಕಾದಿ ಪೂಗಳಿಂದ । ಸಲ್ಲಲಿತ ಗಂಧದಿಂ ॥ಫುಲ್ಲಸಾರಿ ಸಾಕ್ಷಿ ನಿನ್ನ । ಪಲ್ಲವ ಧರಿಸಿ ಮುನ್ನ ॥ 1 ॥

ಕಾಂತನನ್ನು ನಿತ್ಯಾ । ಯುಷ್ಯವಂತರಾಗಿ ಬಾಳಲು ॥ ಸಂತಸಾದಿ ವರವ ನೀಡು । ಕುಂತಳಾಗಿ ಬಾ ಸುರೆ ॥ 2 ॥

ಶೋಢಶೋಪಚಾರಗಳನು । ಮಾಡಿ ಭಕ್ತಿಯಿಂ ಶಿವೆ ॥ ಜೋಡಿಸೆನ್ನ ಕೈಗಳಿಂದ । ಬೇಡುತಿರ್ಪೆ ನಿನ್ನನು ॥ 3 ॥

## 4.4 ದೇವಿ ಪೂಜೆ

ಪೂಜಿಸುವೆನು ತಾಯೆ । ಬಹು ಭಕ್ತಿಯಿಂದಲಿ । ತೇಜೋಮಯಳೆ ಕಾಯೆ ॥

ಪೂಜಿಸುವೆನಾ ನಿನ್ನ ದೇವಿ । ತ್ಯಜಿಸಿ ಸಕಲ ಸುಖ ದುಃಖಗಳನು ।

ನಿಜ ಸುಖವ ನಾ ಬಯಸಿ ಸರಸ್ವತಿ । ಹೇ ಜಗನ್ಮಾತಾ ಅತಿ ಪ್ರೇಮದಿ ॥ 1 ॥

ಮಿಂದು ಮಡಿಯನುಟ್ಟು । ಶುದ್ಧ ಮನದಿ । ತಂದು ಕುಂಭದಿ ಜಲವ ।

ಒಂದುಗೂಡಿಸಿ ಕ್ಷೀರದಧಿ ಘೃತ । ಇಂದಿರೆ ಮಧು ಸಕ್ಕರೆಗಳ ।

ಚಂದದಿಂದಭಿಷೇಕ ಮಾಡಿ । ವಂದನೆಯ ಮಾಡುತಲಿ ದೇವಿ ॥ 2 ॥

ಕಂದಳಾಗಿಹೆ ನಾನು । ಕಾತ್ಯಾಯಿನಿ ಚಂದ್ರಮೌಳಿಯ ರಾಣಿ ।
ಗಂಧ ಅಕ್ಷತೆಗಳನು ಮತ್ತಾ । ಚಂದನವು ಅರಿಸಿನವು ಕುಂಕುಮ ।
ಚಂದ್ರಮುಖಿಯೆ ಹಚ್ಚಿ ನಿನಗಾ । ನಂದವನು ಪಡೆಯುತಲಿ ನಾನು ॥ 3 ॥

ಪಟ್ಟೆ ಪೀತಾಂಬರವ । ಉಡಿಸಿ ನಿನಗೆ ಇಟ್ಟು ಶಿರದಿ ಕಿರೀಟ ।
ಕಟ್ಟಿ ಒಡ್ಯಾಣವನು ಸೊಂಟಕೆ । ಇಷ್ಟ ಮನದಿಂ ಕೈಗೆ ಕಂಠಕೆ ।
ಪಟ್ಟಿ ಮೊದಲಾದಾಭರಣಗಳ । ಶ್ರೇಷ್ಠಳೆ ಅಲಂಕರಿಸುವೆವು ॥ 4 ॥

ಪಾರಿಜಾತ ಚಂಪಕ । ಗುಲಾಬಿಯು । ಕರವೀರ ಸೇವಂತಿಗೆ ।
ಮುರುಗ ಮಲ್ಲಿಗೆ ಜಾಜಿ ತಾವರೆ । ಪರಿಮಳದ ಕೇದಿಗೆಯು ಸಂಪಿಗೆ ।
ಪರಿಪರಿಯ ಪುಷ್ಪಗಳ ಅರ್ಪಿಸಿ । ಭಾರತಿಯೆ ನಾ ಕರವ ಮುಗಿದು ॥ 5 ॥

ಹೋಳಿಗೆ ವಡೆಗಳನು । ಕರಜಿಕಾಯಿ ಜಿಲೇಬಿ ಬೂಂಧ್ಯಗಳ ।
ಕಲಸಿದನ್ನ ಕ್ಷೀರಾನ್ನಗಳನು । ಶಾಲ್ಯ ಅನ್ನ ದಧ್ಯಾನ್ನಗಳನು ।
ಲಲಿತೆ ಶಾವಿಗೆ ಕ್ಷೀರ । ಪಾಯಸಗಳನು ನೈವೇದ್ಯವನು ಮಾಡಿ ॥ 6 ॥

ಮಾಡುವೆ ಜಲಜಾಕ್ಷಿ । ಪಂಚಾರತಿ । ನೋಡುವೆ ನಿನ್ನ ರೂಪ ।
ಪಾಡುವೆನು ನಿನ್ನನ್ನು ವರ್ಣಿಸಿ । ಜೋಡಿಸಿ ಕರಗಳನು ವಿನಯದಿ ।
ಸಡಗರದಿ ನಮಸ್ಕರಿಸಿ ಶಾರದೆ । ಬೇಡುವೆನು ಪ್ರತಿದಿವಸ ಸೇವೆಯ ॥7॥

ಅಮಿತಪರಾಧಗಳ । ವಿರೂಪಾಕ್ಷ ಭಕ್ತಳ । ಕ್ಷಮಿಸು ನೀ ಭವಾನಿಯೆ ।
ಉಮೆಯೆ ಪಾರ್ವತಿ ಕಮಲೆ ಚಂಡಿಕೆ । ಹೇಮವತಿ ಕಾತ್ಯಾಯಿನೀ ವರ ।
ವಾಮದೇವನ ಪ್ರೇಮ ಸತಿಯೆ । ಕಾಮಿತಾರ್ಥವ ನೀಡಿ ಸಲಹು ॥ 8 ॥

## 4.5 ಶ್ರೀ ದೇವಿಯ ಪೂಜೆ

ನೋಡಿ ಪೋಗಲು ಬಂದೆ ನಾ । ಶ್ರೀ ಚಂಡಿ ಪೂಜೆಯ ।
ಮಾಡಿ ಪೋಗಲು ಬಂದೆನಾ ॥ ಪ ॥

ರೂಢಿಯೊಳು ಕೊಡಚಾದ್ರಿ ಪುರದಲಿ । ಗಾಢದಿ ತಾ ಶಂಕರರಿಗೊಲಿದೆ ।
ಬೇಡಿದಿಷ್ಟಾರ್ಥವನು ಕೊಡುವ । ಕಾಳಿಕಾ ಭವಾನಿ ಪೂಜೆಯ ॥ ಅ.ಪ ॥

ಪುಂಡರಿಕಾಕ್ಷನೊಳು । ಕೋಪದಿ ಇರುವ । ಚಂಡಿ ನವ ದುರ್ಗಾಂಬೆಯ ।
ರುಂಡಮಾಲನ ಪತ್ನಿಯಾದ । ಚಂಡ ಮುಂಡರನು ಸಂಹರಿಸಿಯೆ ।
ಭಂಡರಾದವರನ್ನು ಶಿಕ್ಷಿಸಿ । ಉದ್ಧಂಡರಾದವರನ್ನು ಕಾಯುವ ।
ಕಾಳಿಕಾ ಭವಾನಿ ಪೂಜೆಯ ॥ 1 ॥

ಮಹಿಷಾಸುರನ ಬಾಧೆಗೆ । ಬ್ರಹ್ಮಾದ್ಯರು । ಹಿಮಪರುವತದೊಳಗೆ ।
ಬಂದು ಬೇಡೆ । ಹರನ ಇದುರಲಿ । ಹೊರಟು ಕಾಳಿ ಹರುಷದಿಂದಲಿ ।
ಮಹಿಷನನ್ನು ಸಂಹರಿಸಿ ಇರುವ । ಕಾಳಿಕಾ ಭವಾನಿ ಪೂಜೆಯ ॥ 2 ॥

ಶಾಲ್ಮಲ ನದಿಯ ಮುಂದೆ । ಒಲಿದು ನೋಡೆ । ಕುಲವ ರಕ್ಷಿಸೆ ಶೀಘ್ರದಿ ।
ಸಲಹು ನಿತ್ಯ ನೆನೆವೆ ನಿನ್ನನು । ಕಲಹ ಭರಿತದಿ ಕಲಿಯು ಆದಳು ।
ಒಲಿದು ಮನ ಹರುಷದಲಿ ಇರುವ । ಕಾಳಿಕಾ ಭವಾನಿ ಪೂಜೆಯ ॥ 3 ॥

## 4.6 ಗೌರಿ ಪೂಜೆ

ಪೂಜೆಯ ಮಾಡುವೆವು । ಗೌರಿಯ । ಪೊಜೆಯ ಮಾಡುವೆವು ॥ ಪ ॥

ವಾಸನೆ ಪೂರಿತ ಚಂಪಕ ಮೊದಲಾದ । ಹೂವನೆ ಮುಡಿಸುವೆವು । ಗೌರಿಗೆ ।
ಹೂವನೆ ಮುಡಿಸುವೆವು ॥ 1 ॥

ಜಗದೊಳು ಸಕಲ । ಮುಗುದರ ಪೂಜೆಯ । ನಗೆಮೊಗದಿಂದಲಿ ಪಡೆಯುವ ದೇವಿಗೆ ॥
ಹೂವನು ॥ 2 ॥

ಬೇಡಿದ ಇಷ್ಟವ ನೀಡುವ ದೇವಿಗೆ । ಹಾಡುತ ಪಾಡುತ । ನಮಿಸುತ ಜಾಜಿಯ ॥
ಹೂವನು ॥ 3 ॥

ಭಕುತಳ ಪೂಜೆಗೆ ಮುಕುತಿಯ ನೀಡುವ । ಅಕಳಂಕ ಚರಿತಳ ವೇಣಿಗೆ ಮಲ್ಲಿಗೆ ॥
ಹೂವನು ॥ 4 ॥

## 4.7 ದೇವಿ ನೈವೇದ್ಯ

ಕರುಣದಲಿ ಕೈಕೊಳ್ಳೆ । ಕಮಲಾಕ್ಷಿ ಭೋಜನವ ।
ಶರಣ ರಕ್ಷಕಿಯೆ ಪರಿ । ಪರಿಯ ಭಕ್ಷ್ಯಗಳ ॥ ಪ ॥

ಶೃಂಗಾರ ಮಂಟಪದಿ । ಬಂಗಾರ ಪೀಠದಲಿ । ಇಂದು ದೀವಿಗೆ ಇರಿಸಿ ।
ರಂಗವಲ್ಲಿಯ ರಚಿಸಿ । ಇಂದುವದನೆಯರೆಲ್ಲ । ತಂದಿಟ್ಟ ಭಕ್ಷ್ಯಗಳ ।
ಬಂದು ನೀ ಸ್ವೀಕರಿಸು । ಇಂದಿರಾ ದೇವಿ ॥ 1 ॥

ಅಂಬೆ ಮೂಕಾಂಬೆಯೆ । ಹೇರಂಭ ಜನನಿಯೆ ನಿನ್ನ । ನಂಬಿರುವ ಸುಜನರು ।
ತಂದಿಟ್ಟ ಭಕ್ಷ್ಯಗಳ । ಇಂದು ನೀ ಕರುಣದಲಿ । ಕೈಕೊಳ್ಳಬೇಕೆನುತ ।
ವಂದಿಸುತೆ ಕರಗಳನು । ಮುಗಿದು ಬೇಡುವೆವು ॥ 2 ॥

ಶಾಲ್ಯಾನ್ನ ಚಿತ್ರಾನ್ನ । ಪಕ್ವಾನ್ನ ಪಾಯಸವ । ಸಾವಿತ್ರಿ ಗಾಯತ್ರಿ ।
ಸರಸ್ವತಿಯು ನೀನೆಂದು । ಸಾಸಿರ ನಾಮದಲಿ । ಸಾರಿ ಪೊಗಳುವೆ ತಾಯೆ ।
ಸೇವಿಸಿ ಕೊಳ್ಳಮ್ಮ । ತವಪಾದದೆಡೆಯಲ್ಲಿ ॥ 3 ॥

## 4.8 ದೇವಿಗೆ ನೈವೇದ್ಯ

ಮೆಲ್ಲನಾರೋಗಣೆ ಮಾಡು ತಾಯೆ ॥ ಜಗದ್ವಲ್ಲಭೆ ಮಹದುರ್ಗೆ । ಮಹಮ್ಮಾಯೆ ॥ ಪ ॥

ಆವುಣಿ ಸರದೋಲೆ । ಆಣೆ ಮುತ್ತಿನ ಕಪ್ಪು । ಭೋರೆಂಬ ಶಂಖ ಪೆಂತಗಳ್ ಹೊಳೆಯೆ ।
ಕಾಲುಂಗುರ ಪಿಲ್ಲಿ । ವೀರ ಮುದ್ರಿಕೆಯಿಟ್ಟು । ಬಾಲ್ಯೆ ದುರ್ಗಾಂಬಿಕೆ ಸವಿಸವಿದು ॥ 1 ॥

ಹಸಿರು ಬಳೆಯ ಮುಂದೆ । ಮಿಸುಣಿಯ ಕಡಗವು । ಕುಶಲದ ಹಿಂಬಳೆ ಥಳಥಳಿಸೆ ।
ಹೊಸಮುತ್ತಿನ ಚುಳುಕಿ । ವೀರ ಮುದ್ರಿಕೆ ಇಟ್ಟು ।
ಶಶಿ ಮುಖಿ ದುರ್ಗಾಂಬಿಕೆ ಸವಿ ಸವಿದು ॥ 2 ॥

ಪಂಚ ರತ್ನದ ಸರ ಪ್ರಭೆಗಳಿಂದೊಪ್ಪುವ । ಮಿಂಚುವ ಜಲ ಕಮಲಗಳು ಹೊಳೆಯೆ ।
ಪಂಚರತ್ನದ ಓಲೆ । ಥಳಥಳಿಸುತ್ತಲೆ । ಪಂಚಾಮೃತವನೆ ಸವಿಸವಿದು ॥ 3 ॥

## 4.9 ಶ್ರೀ ದೇವಿಗೆ ಆರತಿ

ಆರತಿ ಎತ್ತುವೆನಾ । ಮನದಿಷ್ಟದಾರತಿ ಬೆಳಗುವೆನಾ ॥ ಪ ॥

ಆರತಿ ಎತ್ತುವೆ ತಾರಕ ರೂಪೆಗೆ । ಮಾರ ಸಂಹಾರ ಶರೀರದಿ ತೋರ್ಪಳಿಗೆ ॥ ಅ.ಪ ॥

ಕರವಿಷ್ಣು ಪ್ರೀಯಳಿಗೆ । ಪರಮೇಶ್ವರನ ಪ್ರಿಯಳಾದ ಪಾರ್ವತಿಗೆ । ಸರ್ವಶರೀರವ ಪೂರ್ಣಾಭರಣವ । ತೋರ್ವ ಮುಖದ ಮೇಲೆ ಸೂರ್ಯನ ಕಲೆಯೊಳು ॥ 1 ॥

ಶಂಖ ಚಕ್ರವ ಧರಿಸಿ । ದೈತ್ಯರನೆಲ್ಲ ಬಿಂಕದಿ ಸಂಹರಿಸಿ । ಪಂಕಜ ಮುಖದೊಳು ಕುಂಕುಮ ಕಲೆಯೊಳು । ಕಿಂಕರನೆ ಕಾಯ್ದ ಶಂಕರನ ಪ್ರಿಯಳಿಗೆ ॥ 2 ॥

ನವವಿಧ ರೂಪಳಿಗೆ । ನರಾತ್ರಿಯೊಳ್ ವಿವಿಧಾಗಿ ತೋರ್ಪಳಿಗೆ । ಭುವನವನೆಲ್ಲವ ಪ್ರಿಯದಲ್ಲೆ ಸಲಹುವ । ನವಶಕ್ತಿ ರೂಪೆಗೆ ಸುಮನ ಸುಪ್ರೀತೆಗೆ ॥ 3 ॥

ಮಯೂರವಾಹಳಿಗೆ । ವಾಯುವನೆಲ್ಲವ ಆಯದಿ ನಿಲಿಪಳಿಗೆ । ಬಾಯಮಾತುಗಳೊಳು ನ್ಯಾಯವಾಗಿಹಳಿಗೆ । ತೋಯಜ ಕಮಲವ ದೇಹದಿ ತೋರ್ಪಳಿಗೆ ॥ 4 ॥

## 4.10 ಗೌರಿಗೆ ಆರತಿ

ಮಂಗಳಾರತಿ ಎತ್ತಿರೆ । ಅಂಗನೆಯರು । ಮಂಗಳಾರತಿ ಎತ್ತಿರೆ ॥ ಪ ॥

ರಂಗ ಕುಂತಳೆಯರು । ಶೃಂಗಾರಶೀಲೆಯರು । ಗಂಗಾಧರನ ಸತಿ । ಮಂಗಳ ಗೌರಿಗೆ ॥ ಅ.ಪ ॥

ಮಿಂದು ಮಡಿಯನುಟ್ಟು । ಶುಚಿಯಲಿ । ಬಂದು ಗುಡಿಯೊಳ್ ನಿಂದು । ಗಂಧ ಚಂದನ ನೀಡಿ । ಧೂಪ ದೀಪವ ತೋರಿ । ತಂದು ನೈವೇದ್ಯ ತಾಂಬೂಲ ಸಮರ್ಪಿಸಿ ॥ 1 ॥

ತ್ರಿಪುರ ಸುಂದರಿ ಶಿವೆಗೆ । ಮೆರೆವ ಕುಲ ರಿಪು ಕುಲ ಸಂಹರಿಗೆ । ಕುಶಲದಿ ಗೈಯುವ ನಿಪುಣೆಯರ ಸೇವೆಗೆ । ವಿಫುಲ ಸೌಖ್ಯವ ಈವ ಚಪಲಾಕ್ಷಿ ಈಶೆಗೆ ॥ 2 ॥

ಕಾಮಹರನ ಸತಿಗೆ । ನಂಬಿದ ಸುರ ಸೋಮರ ಪೊರೆವಳಿಗೆ । ಸೋಮಶೇಖರನೊಳು ಪ್ರೇಮದಿ ಮೆರೆವ ಕು । ಮಾರಸ್ವಾಮಿಯ ಕಹ ಜಾತನ ಮಾತೆಗೆ ॥ 3 ॥

ಮದಗಜ ರೂಢಳಿಗೆ । ಕದನ ವಿದುಷ್ಟ ಮಧು ಕೈಟಭಾಂತಕಿಗೆ । ಮುಗುದೆಯರೆಲ್ಲರು ಮಧುರ ಗಾನದಿ ಪಾದ । ಪದುಮಕ್ಕ್ವಂದಿಸಿ ಗೌರಿ ತದಿಗೆಯ ದಿವಸದಿ ॥ 4 ॥

ಕುಂಭಿನಿಯೊಳು ಮೆರೆವ । ದಕ್ಷಿಣ ಕಾಶಿ ಎಂಬ ಕ್ಷೇತ್ರದಿ ಇರುವ । ಕಂಬು ಕಂದರಿ ತನ್ನ ನಂಬಿದ ಸತಿಯರ । ಸಂಭ್ರಮದಲಿ ಕಾಯ್ವೆನೆಂಬ ತಾಮ್ರ ಗೌರಿಗೆ ॥ 5 ॥

## 4.11 ದೇವಿ ಪರ

ಬಾರೆ ಭಾಗ್ಯದ ನಿಧಿಯೆ । ಕರವೀರನಿವಾಸಿನಿ ಸಿರಿಯೆ ।
ಬಾರಿ ಬಾರಿಗೂ ಶುಭ ಕೋರು ನಮ್ಮ ಮನೆಗೆ ॥ ಪ ॥

ಲೋಕ ಮಾತೆಯೆ ನೀನು । ನಿನ್ನ ಮಕ್ಕಳಲ್ಲವೇ ನಾವು ।
ಆಕಳು ಕರುವನು ಸ್ವೀಕರಿಸುವ ಪರಿ । ನೀ ಕರುಣದಿ ಕಾಲಿಡು ನಮ್ಮ ಮನೆಗೆ ॥ 1 ॥

ನಿಗಮವೇದ್ಯಳೆ ನೀನು । ನಿನ್ನ ಪೊಗಳಲಪ್ಪೆನೆ ನಾನು ।
ಮಗಳಪರಾಧವ ಕ್ಷಮಿಸಬೇಕೆನುತ । ಲಗುಬಗೆಯಿಂದಲಿ ಪನ್ನಗವೇಣಿ ॥ 2 ॥

ಕಡೆಗೆ ನಮ್ಮನೆ ವಾಸ । ಒಡೆಯ ಅನಂತಧೀಶ । ಒಡೆಯನಿರುವಲ್ಲಿ ತಾ ಮಡದಿಯು ಇರುವಳು । ರೂಢಿಗುಚಿತವಿದು ನಡೆ ನಮ್ಮ ಮನೆಗೆ ॥ 3 ॥

## 4.12 ದೇವಿ ಪರ

ವಾಣಿ । ಪಾಲಿಸೆ ಅಜರಾಣಿ ॥ ಪ ॥

ವೀಣಾ ಪಾಣಿ ವಾಣಿ ಕಲ್ಯಾಣಿ । ಕ್ಷೋಣಿಯೊಳ್ ನಿನಗೆಣೆಗಾಣೆ ಶರ್ವಾಣಿ ॥ 1 ॥

ಆಗಮ ವಿನುತೆ । ರಾಗ ಸುಪ್ರೀತೆ । ಯೋಗಿ ಜನರ ಕರಕಮಲ ಸಂಜಾತೆ ॥ 2 ॥

ಸರಸಿಜ ನೇತ್ರೆ । ಪರಮ ಪವಿತ್ರೆ । ಸುರನರ ಸೇವಿತೆ ಸ್ಮರಿಸುವೆ ಮಾತೆ ॥ 3 ॥

ಧಾತ್ರಿ ಸೂತ್ರೆ ನಿನ್ನ । ಪ್ರಾರ್ಥಿಸುತಿಹರ । ಕೀರ್ತಿಯೊಳ್ಮೆರೆಸಿ ಆಡಿಸಿದೆ ಭಜಕರ ॥ 4 ॥

## 4.13 ದೇವಿಯಲ್ಲಿ ವರ ಬೇಡಿದ್ದು

ವರಗಳ ನೀಡೆ ತಾಯೆ । ಕಾಳಿಕಾದೇವಿ ॥ ಪ ॥

ವರವ ಬೇಡುವೆ । ಚರಣಕೆರಗುವೆ । ದುರಿತದರಿಧ್ವಂಸಕಾರಿಣಿ ।
ಸುರನರೋಗ್ರಣಿ ನಮಿಪೆ ಮಾತೆ । ಪರಮ ಮಂಗಳೆ ಪಾಲಿಸೆ ॥ ಅ.ಪ ॥

ಹಸನಾಸ ಹಸಿನಿಯೆಂದು । ನಂಬಿದೆ ನಿನ್ನ ಕುಸುಮಲೋಚನೆ ನಾ ಬಂದು ।
ಕುಸುಮ ಶರಧಿಯ ಮೋಹ ಮತ್ಸರ । ಆಸೆ ಬಹು ಕ್ರೋಧಂಗಳೆಲ್ಲವ  ಅಸುಗಡಿಸಿ ।
ಸದ್ಗತಿಯ ಪಾಲಿಸು ಕುಸುಮ ಬಾಲರುದ್ಧಾರವಾಗಲಿ ॥ 1 ॥

ಜನ್ಮವಿಲ್ಲಿಗೆ ಸಾಕಮ್ಮ । ಮುಂದೆನಗಿನ್ನು ಜನ್ಮವೀಯಲು ಬೇಡಮ್ಮ ।
ಜನ್ಮ ಜನ್ಮವು ತಿರುಗಿ ಬಹುವಿಧ । ಕರ್ಮರೇಚಕ ಪತ್ರೆಯಗಳಿಂ ।
ಮರ್ಮ ಗ್ಯೈಯ್ದಿಂ ಮರ್ಮ ಸೇರ್ವುದ ಬಲ್ಮೆಯಿಂದಲಿ ಗೆಲ್ಲಲು ॥ 2 ॥

ಯಾರ್ಯೆನ್ನ ಕಾಯ್ವವರು । ನಿನ್ನೊಳ್ಹರತು ಇನ್ನ್ಯಾರ್ಯೆನ್ನ ಪೊರೆವವರು ।
ಭೂರಿ ಭಾಗ್ಯ ವಿದಾಯಿನಿ । ದೂರಿ ಸ್ತುತಿಸಿ ಭರದಿ ರಕ್ಷಿಸು ।
ಕಾರುಗಲ್ಲ ಕಾನೊಳು ನೆಲೆಸಿಹ ಮಾಲತೀಶನ ರಾಣಿಯೆ ॥ 3 ॥

## 4.14 ದೇವಿ ಪರ

ಹೇ ಜನನಿ ಜಗದಂಬೆ । ನಿನ್ನಡಿಗೆ ಶರಣೆಂಬೆ ॥ ಪ ॥
ಮಾರ್ಗದಲಿ ಬಂದೆನ್ನ । ಸಾಧನೆಗೆ ಅನುವಾಗು ॥ ಅ.ಪ ॥

ಮೂರ್ಜಗವ ಪಾಲಿಸುತೆ । ಸೂತ್ರಧಾರಿಣಿ ಮಾತೆ ॥
ಪೂಜಿಸುತೆ ಪ್ರಾರ್ಥಿಸುತೆ । ಬಾಳುವೆವು ಮಾತೆ ॥ 1 ॥

ಗಿರಿಜಾತೆ ನಿನ್ನಡಿಯ । ನಂಬಿರುವ ಭಕ್ತರಿಗೆ ॥
ನೆರಳಿಂದ ಮರೆಮಾಡು । ಮರೆಯಲಾರೆವು ತಾಯೆ ॥ 2 ॥

ಕರುಣದಲಿ ನೀ ನಲಿಯೆ । ಕಲ್ಲು ಕರಗುವುದಮ್ಮಾ ॥
ಉರವಣಿಸಿ ನೀ ಮುನಿಯೆ । ಬ್ರಹ್ಮಾಂಡವಿರದಮ್ಮಾ ॥ 3 ॥

## 4.15 ದೇವಿ ಸ್ತುತಿ

ಕರುಣಾಕರಿ ಕನಕಾಂಬರಿ । ತರುಣಿಯೆ ಪಾರ್ವತಿ ಓಂಕಾರಿ ।
ನಿನ್ನ ಚರಣವ ಪೂಜಿಪೆ ದೇವಿ ॥ ಪ ॥

ಕಾಮೇಶ್ವರೇಶ್ವರಿ ದೈತ್ಯಾರಿಣಿ । ಬಾ ಉಮಾಮಹೇಶ್ವರಿ ಕಾಂತಾಮಣಿ ।
ಕುಮುದಾನನೆ । ಕಂಸಾರಿಣಿ । ನಮಿಸುವೆ ಮೂರ್ಜಗದಾಧಾರಿಣಿ ॥ 1 ॥

ಗಂಗಾಧರೇಶ್ವರಿ ಗಾನಪ್ರಿಯೆ । ಪಿಂಗಲ ಲೋಚನೆ ಪ್ರೇಮಮಯೆ ।
ಮಂಗಲೆ ನೀ ಶುಂಭಾರಿಯೆ । ಓಂಕಾರಿ ಭಾರತಿ ಭದ್ರಪ್ರಿಯೆ ॥ 2 ॥

ಪೂಜಾ ವಿಧಾನವ ನಾ ತಿಳಿಯೆ । ಭಜನೆಯ ಮಾಡಲು ನಾನರಿಯೆ ।
ವಿಜಯಾಂಬಿಕೆ । ಅಘನಾಶಿನಿ । ರಜತಾದ್ರಿವಾಸಿನಿ ಸಲಹೆನ್ನನು ॥ 3 ॥

## 4.16 ಶ್ರೀ ದೇವಿ ಭಜನೆ

ವಂದಿಸುವೆ ನಾ ಹರನಾ ಪ್ರಿಯೆ ॥ ಪ ॥ ಪಾವನ ಮೂರ್ತಿ ಮಹೇಶ್ವರಿ ॥ ಅ.ಪ ॥

ಶುಂಭ ನಿಶುಂಭರ ಖಂಡಿಸಿ ಮೆರೆವಳೆ । ಅಸುರಾಂತಕ ಶಿವ ಶಕ್ತಿಯೆ ।
ದುರುಳರ ಮರ್ದಿಸಿ । ಶಿರವ ಚಂಡಾಡಿದೆ । ಸರಸಿಜನಯನೆ ಶ್ರೀ ಚಂಡಿಕೆ ॥ 1 ॥

ಮೋಹನ ರೂಪದಿ ಮೋಹಿನಿಯೆನಿಸಿದೆ । ಇಳೆಯೊಳು ನೀ ಶಿವ ಶಕ್ತಿಯೆ ।
ಭಗವತಿ ನಿನ್ನ ಕೊಂಡಾಡಿ ಓಂಕಾರಿಣಿ । ಸುಜನ ವಂದಿತೆ ಸೌಭಾಗ್ಯದಾ ॥ 2 ॥

ಜನನ ಮರಣ ಜನ್ಮಾಂತರದಲಿ ನಾ । ಬಳಲುತ ಭುವಿಯೊಳು ನೊಂದೆನಾ ।
ಮೃತ್ಯುಂಜಯನರ್ಧಾಂಗಿನಿ ಪಾರ್ವತಿ । ಪಾರುಮಾಡಿಸು ಭವ ಬಂಧನ ॥ 3 ॥

ನಾನು ತಾನೆಂಬಹಂಕಾರವನಳಿಯುತ । ಭಾವಿಸಿ ಶಿವೆಯೊಳಗಹೊಂದುತಾ ।
ಜೀವಿಗಳೊಡೆಯ ಶ್ರೀ ಶಂಕರನಾ ಸತಿ । ಮಾಡು ದಯವ ನೀನೆನ್ನುತ ॥ 4 ॥

ಚಂಡಿ ಚಾಮುಂಡಿ ಭೂಮಂಡಲದೊಳಗತಿ । ಹಿಂಡು ದೈತ್ಯರ ಸಂಹಾರಿಣಿ ।
ರುಂಡಮಾಲಿನಿ ಭೂಮಂಡಲ ಸಲಹುವ । ಚಂದ್ರವದನೆ ನಾ ವಂದಿಪೆ ॥ 5 ॥

## 4.17 ಶ್ರೀ ದೇವಿಯಲ್ಲಿ ಹೂ ಬೇಡಿದ್ದು

ಕೊಡು ನಿನ್ನ ಮುಡಿ ಹೂವ ಜಡಜಾಕ್ಷಿ ಶ್ರೀಗೌರಿ ।ಮಡದಿ ಮಣಿಯರು ಬೇಡುವುದಾ ॥
ಪ ॥

ಸಿರಿಸಂಪತ್ತನು ಕೊಟ್ಟು ಪೊರೆ ತಾಯೆ ನಿನ್ನಯ । ಕರುಣೆ ಭಿಕ್ಷೆಯ ಬೇಡುತ್ತಿರುವಾ ॥
ತರಳೆಯರಿಗೆ ಕರುಣಿಸು ಸುಖ ಸೌಭಾಗ್ಯ । ವರವ ಬೇಡುವೆ ಕರ ಮುಗಿದು ॥ 1 ॥

ಪುತ್ರ ಪೌತ್ರಾದಿ ಸಮಸ್ತ ಸೌಭಾಗ್ಯವ । ಅರ್ಥಿಯಲ್ಲಿರುವ ಯೋಗವನು ॥

ಇತ್ತೆನ್ನ ಪತಿ ಪ್ರೀತಿ ವೆತ್ತಿರುತಿಹ ಮತಿ । ಸ್ವಸ್ಥದಿ ಕರುಣಿಸೆನ್ನುವೆನು ॥ 2 ॥

ಮನದಿಚ್ಛೆ ತ್ವರಿತದಿ ಎನಗನುಕೂಲಿಸು । ವಿನಯದಿ ನಿನ್ನ ಧ್ಯಾನವನು ॥

ಮನದೊಳಗೈಕ್ಯವಾಗಿರುಗಿರಲೆಂದು ಬೇಡುವೆ । ಎನಗೀಗ ಕೊಡು ಸುಜ್ಞಾನವನು ॥ 3 ॥

## 4.18 ಶ್ರೀ ದೇವಿಯಲ್ಲಿ ಹೂ ಬೇಡಿದ್ದು

ದೇವಿ ಪಾಲಿಸೆನ್ನನು ಮುದದಿಂದ । ಮಹಾದೇವಿ ಪಾಲಿಸೆ ಸುಮವೊಂದ ॥ ಪ ॥

ಶಾಂಭವಿ ಶೈಲಜೆ ವಂದಿಪೆ ಪದಕೆ । ಕುಂಭಿನಿಗಾಧಾರೆ ನೀನೆಂಬುದಕೆ ।
ನಂಬಿ ಬಂದೆನು ತಾಯೆ ಪೊರೆಯೆಂಬುದಕೆ ॥ 1 ॥

ಸೃಷ್ಟಿಗೊಡತಿ ಎನ್ನಿಷ್ಟವ ನೀಡೆ । ಕೆಟ್ಟ ಭಾವದಿ ಕಂಗೆಟ್ಟೆನು ನೋಡೆ ।
ಶ್ರೇಷ್ಠಳೆಂದೆನಿಸಿ ಎನ್ನ ನೀ ಕಾಪಾಡೆ ॥ 2 ॥

ಮರುಳು ಮೋಹದ ಮಂದಮತಿಯನು ಬಿಡಿಸಿ । ನಿರುತ ಸುಜ್ಞಾನವ ಅರಿವಿನೊಳಿರಿಸಿ ।
ನಿರುತ ನಿನ್ನೊಳಗಿರ್ಪ ದಯೆಯೆಂಬ ಸುಮವೊಂದ ॥ 3 ॥

ನೊಂದು ಬಂದೆನು ಈ ಭವದ ತಾಪದಲಿ । ಸಂದೇಹದೊಳು ಬಿದ್ದ ಮಂದಮತಿಯಲಿ ।
ಮುಂದೆ ಗತಿಯ ತೋರಿ ಕಂದಳಾನಂದದಿ ॥ 4 ॥

ಪರಿಪರಿ ಪುಷ್ಪವ ಬೇಡೆನು ನಾನು । ಸ್ಥಿರವಾದ ಸುಮವೊಂದ ನೀಡವ್ವ ನೀನು ।
ಸ್ಥಿರವಾದ ಸುಖ ಸೌಭಾಗ್ಯದೊಳ್ ಮೆರೆಸಿ ॥ 5 ॥

## 4.19 ಶ್ರೀ ದೇವಿಯಲ್ಲಿ ವರ ಬೇಡಿದ್ದು

ವಂದಿಸುವೆನು ನಾ ಒಂದೇ ಮನದಲಿ । ಅಂಬಿಕೆ ಕರುಣದಿ ಕಾಯಮ್ಮಾ ॥ ಪ ॥

ಎಂದೆಂದಿಗೂ ಕುಂದದ ಸೌಭಾಗ್ಯದ । ಒಂದೇ ವರವನು ನೀಡಮ್ಮಾ ॥ ಅ.ಪ ॥

ಮುತ್ತಿನ ಆಭರಣಗಳೆಷ್ಟಿದ್ದರೂ । ಅಷ್ಟು ಎನಗೆ ಅದು ಏಕಮ್ಮಾ ।
ಮುತ್ತೈದೆತನಕೊಪ್ಪುತಿರುವ ಈ । ಬೊಟ್ಟು ಕುಂಕುಮವೇ ಸಾಕಮ್ಮಾ ॥ 1 ॥

ಕಟ್ಟಿದ ಕರಿಮಣಿ ಮುತ್ತಿನ ಮೂಗುತಿ । ಇಟ್ಟ ಕಿವಿಯ ಹರಳೋಲೆಗಳು ।
ತೊಟ್ಟ ಬಳೆಯು ಕರಕೊಪ್ಪುತಿರಲು । ಎನಗಿಷ್ಟ ನೀಡಿದರೆ ಸಾಕಮ್ಮಾ ॥ 2 ॥

ಸತಿಯರಿಗೆ ಸೌಭಾಗ್ಯವ ಕೊಡುತಿಹ । ವ್ರತ ಕಥೆ ಯಾವುದೂ ಬೇರಿಲ್ಲ ।
ಸತತ ನಿನ್ನಯ ಸ್ತುತಿ । ಪತಿ ಸೇವೆಯೆ ಮತಿ । ಮುಕ್ತಿಯ ಮಾರ್ಗಕೆ ಇದುವೆ ಗತಿ ॥ 3 ॥

ಮಾತೃ ಸ್ವರೂಪಿಣಿ ನೇತ್ರವನರಳಿಸಿ । ನಿನ್ನಯ ಪುತ್ರರ ನೋಡಮ್ಮಾ ।
ಪಾತ್ರೆಯು ಅಕ್ಷಯವಾಗಲಿ ಎಂದು । ಆತ್ಮವರಿತು ನೀ ಹರಸಮ್ಮಾ ॥ 4 ॥

## 4.20 ಶ್ರೀ ದೇವಿಯಲ್ಲಿ ಹೂ ಬೇಡಿದ್ದು

ಪಾಲಿಸಮ್ಮಾ । ಪಾಲಿಸೆ ದೇವಿ । ಪಾಲಿಸಬೇಕಂಬಾ । ಪಾರಿಜಾತವನು ॥ ಪ ॥

ನೀಲವೇಣಿ । ನಿತ್ಯಕಲ್ಯಾಣಿ । ನಿನ್ನ ನಂಬಿದೆ ಪೂರ್ಣ ಪ್ರವೇಣಿ । ವಾರಿಜನಾಭನ ।
ಮೋಹದ ರಾಣಿ । ನಿನ್ನ ವಾಲೆ ದುರುವಿನ ಮೇಲೆ । ಮುಡಿದ ಮಲ್ಲಿಗೆಯಾ ॥ 1 ॥

ದುಷ್ಟದೈತ್ಯರ । ವಧೆಯ ಮಾಡಿದಳೆ । ಸಿಟ್ಟಿಲಿ ಮಹಿಷನ ಮೆಟ್ಟಿ ತುಳಿದಳೆ । ಭಕ್ತರ
ಕರೆದು । ಅಭಯವನು ನೀಡಿದಳೆ । ಚಂಡಿಕೆ ದಯಮಾಡು । ಕೆಂಡಸಂಪಿಗೆಯಾ ॥ 2 ॥

ಕರಿಯ ಕಾನಿನೊಳು ತಾ ನೆಲೆಸಿ । ಕಲ್ಲು ಬಂಡೆಯೊಳಗೆ ಉದ್ಭವಿಸಿ । ಲಿಂಗರೂಪವ ।
ಜನರಿಗೆ ತೋರಿಸಿ । ಚಂಡಿಕೆ ದಯಮಾಡು । ಕೆಂಡಸಂಪಿಗೆಯಾ ॥ 3 ॥

----- ****** -----

# 5 ಮಹಾಲಕ್ಷ್ಮಿ

## 5.1 ಲಕ್ಷ್ಮಿ ಬಂದಿದ್ದು

ಬಂದಳು ಮಹಾಲಕ್ಷ್ಮಿ । ನಮ್ಮಯ ಮನೆಗೆ । ಸಂಜೆಯ ಹೊತ್ತಿನಲಿ ॥ ಬಂದಳು ನಮ್ಮ ಮನೆಗೆ । ನಿಂದಳು ಗೃಹದಲ್ಲಿ । ನಂದ ಕಂದನ ರಾಣಿ । ವೃಂದಾವನದಿಂದ ॥ ಪ ॥

ಹೆಜ್ಜೆ ಮೇಲೊಂದು ಹೆಜ್ಜೆ । ಇಕ್ಕುತ ಕಾಲ ಝಣಿರೆಂಬ ನಾದದಲಿ ॥ ಸಜ್ಜನ ಭಕ್ತರಿಗೆ । ಸಾಯುಜ್ಯ ಕೊಡಲಿಕ್ಕೆ । ಮೂರ್ಜಗದೊಡೆಯನ । ಮುದ್ದು ಮೋಹದ ರಾಣಿ ॥ 1 ॥

ಶ್ರಾವಣ ಮಾಸ ಸಂಪತ್ ಶುಕ್ರವಾರ । ಪೂರ್ಣಿಮ ದಿವಸದೊಳು ॥
ಭೂಸುರರೆಲ್ಲ ಕೂಡಿ । ಸಾಸಿರ ನಾಮ ಪಾಡೆ । ವಿಶ್ವ ವಂದಿತೆ ನಮ್ಮ ।
ವಾಸುದೇವನ ರಾಣಿ ॥ 2 ॥

ಕನಕಾಭರಣ ಭೂಷಿತೆ । ಮಹಾಲಕ್ಷ್ಮಿ । ಕನಕಾಂಬರ ಶೋಭಿತೆ ॥ ಕನಕ ಕುಂಡಲ । ಕಿರೀಟಧಾರಿಣಿ ದೇವಿ । ಕರುಣವ ಬೀರುತ್ತ । ಭರದಿ ತಾ ಬಂದಳು ॥ 3 ॥

ಕಮಲ ನಯನೆ ಬಂದಳು । ನಮ್ಮ ಮನೆಗೆ । ಕನಕಾಭರಣವಿಟ್ಟು ॥ ತರತರ ಪೀತಾಂಬರ । ಶೋಭಿತವಾದ । ಕಮಲಾಸನದೊಳು । ಕಮಲೇಶನ ರಾಣಿ ॥ 4 ॥

ಹೇಮಾಭರಣ ಭೂಷಿತೆ । ಮಹಾಲಕ್ಷ್ಮಿ । ಕ್ಷೀರಾಂಬುಧಿ ವಾಸಿತೆ ॥ ನಾರಾಯಣ ಪ್ರೀತೆ । ಧಾರುಣಿ ಪೋಷಿತೆ । ದಾರಿದ್ರ್ಯಹಾರಿಣಿ । ದೀನೋದ್ಧಾರಿಣಿ ॥ 5 ॥

ಕನಕವಾಯಿತು ಮಂದಿರ । ದೇವಿಯು ಬರಲು । ಜಯ ಜಯ ಜಯವೆನ್ನಲು ॥
ನಿರುತದಿ ಯೋಗಿಗಳ । ಸೇವ್ಯಮಾನಿತಳಾಗಿ । ಕನಕಮಲ್ಲಿಗೆ ತನ್ನ ।
ಕಾಂತನ ಒಡಗೊಂಡು ॥ 6 ॥

## 5.2 ಲಕ್ಷ್ಮಿ ಪೂಜೆ

ಜಯದೇವಿ ಜಯದೇವಿ । ಜಯ ಜಯ ಜಗನ್ಮಾತೆ ॥ ಜಯವೆಂದಾರತಿ ಬೆಳಗುವೆ ।
ಜಯ ಮಂಗಲದಾತೆ ॥

ಸುರರು ಅಸುರರು ಕೂಡಿ । ಶರಧಿಯ ಮಥಿಸಿರಲು । ಭರದಿಂದುದಿಸಿದೆ ನೀನು ।
ಶರಧಿ ಮಧ್ಯದೊಳು ॥ ಗರುವದಿ ಮೆರೆಯುವ ಅಸುರರ । ಕುಲವನು ನಾಶಿಸಲು ।
ತ್ವರಿತದಿ ಹರಿವರಿಸಿದೆ ನೀ । ಪರಮ ತೋಷದೊಳು ॥ 1 ॥

ಕರಿಗಮನೆಯೆ ಕರುಣಾಕರಿ । ಶರಣರುದ್ಧಾರಿ । ಪರಿಮಳ ಕಸ್ತೂರಿ ಕುಂಕುಮ ।
ತಿಲಕದ್ವೈಯಾರಿ ॥ ಸುರಗಿ ಚಂಪಕ ಮಲ್ಲಿಗೆ । ಸರದ ಅಲಂಕಾರಿ ।
ಶರಣರ ಮನದಿಷ್ಟವ । ದಯದೋರೆ ಓಂಕಾರಿ ॥ 2 ॥

ಕಷ್ಟವ ಶಿಷ್ಟರಿಗೀಯುವ । ದುಷ್ಟರ ನಾಶಿಸಿದೆ । ಸೃಷ್ಟಿಯೊಳವತರಿಸಿಯೆ ।
ಬಹು ಶ್ರೇಷ್ಠಳೆನ್ನಿಸಿದೆ ॥ ಸೃಷ್ಟಿಯೊಳ್ ಭಜಿಸುವ । ಭಜಕರ ಅಭೀಷ್ಟವ ಪೂರ್ತಿಸಿದೆ
। ಅಷ್ಟೈಶ್ವರ್ಯದಿ ಮೆರೆಯುತ । ನೆಲೆಸೆ ಈ ಗೃಹದಿ ॥ 3 ॥

ರಾಜ ರಾಜೇಶ್ವರಿಯೆ । ರಾಜಗೃಹದಿ ಮೆರೆವೆ । ರಾಜಿಪ ಮಣಿಮಯ ।
ರತ್ನಕಿರೀಟದಿ ಶೋಭಿಸಿದೆ ॥ ತೇಜದಿ ರವಿಶಶಿ ಜರೆಯುವ । ಮೂರ್ಜಗ ಮೋಹಿಸಿದೆ ।
ಮಾಜದೆ ತವ ಪದ ಸೇವಿಪ । ಮತಿ ಬೇಡುವೆ ಕೊಡು ಮುದದಿ ॥ 4 ॥

ಅಕ್ಷಯಾತ್ಮಕನರಸಿ । ಭಕ್ತಿ ಮುಕ್ತಿಯನು । ಪಕ್ಷಿಗಮನೆಯೆ ಸರ್ವ । ಶಕ್ತಿಯೆ ನೀನು ॥
ಭಕ್ಷ್ಯ ಭೋಜ್ಯಂಗಳ । ಸಮರ್ಪಿಸಿದ ನೈವೇದ್ಯವನು । ಲಕ್ಷುಮಿದೇವಿಯೆ ನೀನು ।
ಸ್ವೀಕರಿಸುವುದಿನ್ನು ॥ 5 ॥

## 5.3 ಲಕ್ಷ್ಮಿ ಪೂಜೆ

ಬಾರೆ ನಮ್ಮನೆ ಒಳಗೆ । ಭಾಗ್ಯದ ದೇವಿ ॥ ಪ ॥ ಬಾರೆ ನಮ್ಮನೆ ಒಳಗೆ ।
ಬಹಳ ಕರುಣದಿಂದ । ಜೋಡಿಸಿ ಕರಗಳ ಮುಗಿವೆನಾ ಚರಣಕೆ ॥ ಅ.ಪ ॥

ಜರಿಯ ಪೀತಾಂಬರ । ನೆರಿಗೆಗಳ ನೀಯುತ । ಸುರಗಿ ಸಂಪಿಗೆ ಚಂದ್ರ ।
ಹಾರಗಳೊಪ್ಪುವ ॥ 1 ॥

ಮಂದಗಮನೆ ನಿನಗೆ । ವಂದಿಸಿ ಬೇಡುವೆ । ಇಂದಿರೇಶನ ಕೂಡ ಇಂದು ।
ನಮ್ಮ ಮನೆಯೊಳಗೆ ॥ 2 ॥

ಹರಡಿ ಕಂಕಣದುಂಡು । ಕರದಲ್ಲಿ ಹೊಳೆಯುವ । ತರಳೆ ಎನ್ನ ಮೇಲೆ ।
ಕರುಣವಿಟ್ಟು ಬೇಗ ॥ 3 ॥

## 5.4 ಮಹಾಲಕ್ಷ್ಮಿಯಲ್ಲಿ ವರ ಬೇಡಿದ್ದು

ಸೆರಗೊಡ್ಡಿ ಬೇಡಿಕೊಳ್ವೆ । ಮಹಾಲಕ್ಷ್ಮಿ । ವರವ ಕೊಡೆನ್ನ ತಾಯೆ ॥ ಪ ॥

ಸುರಿಸು ರತ್ನದ ಮಳೆಯ ಮನೆಯೊಳು । ತುರುಗಗಳು ಆಲಯದೊಳಿರಲಿ ।
ಕರಿಯು ತೋಷದಿ ಹಾಸು ಹೊಯ್ಯು । ತ್ತಿರಲಿ ಬಾಗಿಲ ಮುಂದೆ ನಿತ್ಯದಿ ॥ ಅ.ಪ ॥

ಧನ ಧಾನ್ಯ ಹೆಚ್ಚಾಗಲಿ । ಉಪ್ಪರಿಗೆಯ । ಮನೆ ಕೋಟೆಗಳನು ಕೊಡೆ ।
ದನ ಕರುಗಳು ಯಾರ ರಥಮಯ ಅನುಪಮ ಫಲಧೀಶ ಗರ್ವದಿ ।
ಧನ ಕೊಡವ್ವ ನೀ ಹರುಷದಿಂದಲಿ । ಘನ ಸುಖದೊಳಿರುವಂತೆ ಮಾಡೆ ॥ 1 ॥

ದಾಸ ದಾಸಿಯರ ಕೊಡೆ ಸರ್ವರಿಗೆ ನೀ । ಭೂಷಣಾಂಬರವ ಕೊಡೆ ।
ಸೂಸಿ ನೀ ಪ್ರತಿ ಶುಕ್ರವಾರದಿ । ಸುಹಾಸಿನಿಯರನು ಕೂಡಿ ಹರುಷದಿ ।
ಘೋಷದಿಂ ಪೂಜಿಸಲು ಸಂತಸ । ವಾಸವಾಗಿರು ನಮ್ಮ ಮನೆಯೊಳು ॥ 2 ॥

ಮನೊಯೊಳಾಡಲಿ ಮಕ್ಕಳು । ಸಂತತ ನಡು ಮನೆಯೊಳ್ತೂಗಲಿ ತೊಟ್ಟಿಲು ।
ದಿನ ದಿನಕೆ ಬಹು ಕಾರ್ಯ ಹೆಚ್ಚಲಿ । ಮನವು ಹರುಷವ ಪಡಲಿ ಬಹು ।
ಬ್ರಾಹ್ಮಣರ ಭೋಜನ ನಿತ್ಯ ನಡೆಯಲಿ । ಇನಿತು ಯೋಗವು ಎನಗೆ ಘಟಿಸಲಿ ॥ 3 ॥

ಧರೆ ಗೋವುಗಳ ಧನವು । ಘಟಿಸಲಮ್ಮ । ಕೆರೆ ಬಾವಿಗಳ ಕಟ್ಟಿಸಿ ।
ಮೆರೆವ ಛತ್ರಗಳನ್ನೇ ಇರಿಸಿ । ಹರಿಯ ಮಂದಿರಗಳನ್ನೇ ಕಟ್ಟಿಸಿ ।
ನಿರುತ ಮಹೋತ್ಸವ ನಡೆಯುವಂದದಿ । ಪರಮ ಸುಕೃತದೊಳಿರುವಂತೆ ಮಾಡೆ ॥ 4 ॥

ಯಾತ್ರೆಗಳಿಗೆ ಪೋಗುತ । ದಾನವನು । ಸತ್ಪಾತ್ರದೊಳಗೆ ಕೊಡುತ ।
ಸ್ತೋತ್ರದಿಂ ಬ್ರಹ್ಮೇಂದ್ರಗೊಂದಿಸಿ । ಸ್ತೋತ್ರದಿಂ ಕೇಳುತಲೆ ಚಿಂತಿಸಿ ।
ಗಾತ್ರವಿಲ್ಲದೆ ಪರಶಿವಾನಂದಾತ್ಮ । ಸುಖಮಯವಾಗುವಂತೆ ॥ 5 ॥

----- ****** -----

# 6 ಸರಸ್ವತಿ

## 6.1 ಸರಸ್ವತಿ ಪರ

ಹಸ್ತದೊಳು ವೀಣೆಯನು ನುಡಿಸುತೆ । ಪುಸ್ತಕದ ಕೈಯಿಂದ ಮೆರೆವಳೆ ।
ಮಸ್ತಕವ ಬಾಗುತ್ತ ಎನ್ನೆರಡ್‌ಹಸ್ತಗಳ ಮುಗಿವೆ ॥ ಪ ॥

ಮತ್ತೆ ನೀ ಪಿಡಿದೆತ್ತಿ ಎನ್ನಯ । ಚಿತ್ತಕಾನಂದವನು ಬೀರುತೆ ।
ಉತ್ತಮದ ಸುಜ್ಞಾನ ಕರುಣಿಸು ಹೆತ್ತ ತಾಯ್ತೆರದಿ ॥ 1 ॥

ಮಾತೆ ತ್ರಿಜಗ ಖ್ಯಾತೆ ಮುನಿಜನ ಜೇತೆ । ಅಜನಸುಪ್ರೀತೆ ಭವದೊಳು ।
ಸೋತು ಬಂದೆನು ಪ್ರೀತಿಯಿಂ ಪೊರೆ ಜಾತಳಂದದಲಿ ॥ 2 ॥

ಸೃಷ್ಟಿ ಕರ್ತನ ರಾಣಿಯೆ । ಎನ್ನಿಷ್ಟವನು ಪಾಲಿಸಲಸಾಧ್ಯವೆ ।
ಎಷ್ಟು ಮೊರೆಯಿಡಲಮ್ಮ ಎನಗೊಂದಿಷ್ಟು ದಯದೋರೆ ॥ 3 ॥

----- ****** -----

# 7 ಗಂಗಾಷ್ಟಮಿ

## 7.1 ಗಂಗೆ ಬಂದಿದ್ದು

ಬಂದಳು ಗಂಗಾ ಭಾಗೀರಥಿಯು ॥ ಬಹಳ ಚಂದದಿಂದಲೆ ನಲಿದಾಡುತಲಿ ॥ ಪ ॥

ನಂದಿವಾಹನನ ಅಂದದ ಮುಡಿ ಮೇಲೆ । ಚಂದದದಿಂದಲೆ ಚಂದ್ರನ ಹೆಡೆಯೊಳ್ ॥
ನಿಂದು ತಾ ಹೊಳೆಯುತ । ಇಂದುವದನೆಯು ತಾ । ವಂದಿಸಿದವಗಾನಂದ ಕೊಡುತ ॥ 1 ॥

ಕೇಶವನಾಸುತೆ ದೇಶ ದೇಶವ ತಿರುಗಿ । ಸಾಸಿರ ಪಾಪಿಯ ದೋಷಗಳ ॥
ನಾಶ ಮಾಡುವೆನೆಂದು । ಘೋಷವ ಮಾಡುತ್ತ । ಕಾಶಿಯೊಳಗೆ ವರ ವಾಸಿಸುತ ॥ 2 ॥

ಸಗರ ಪುತ್ರರಿಗೆ ಮಿಗಿಲ ಪದವ ಕೊಡಲು । ಬಗೆ ಬಗೆಯಿಂದ ಏಕಾಗ್ರತೆಯೊಳ್ ॥
ಭಗೀರಥ ತಪದಲಿ । ಗಗನದ ಮಾರ್ಗದಿ । ಬೇಗದಿ ಬಂದಳು ಮೃಡಾಣಿಯೆನುತ ॥ 3 ॥

ಪರಮ ಪವಿತ್ರಳು । ಗೌರಿಯ ಸವತಿಯು । ಭಾರತಿಗತ್ತಿಗೆ ಸಿರಿ ತನಯೆ ।
ಮೂರು ಲೋಕದೊಳು ಮೆರೆವ । ಶ್ರೀ ಜಾಹ್ನವಿ । ವಿರೂಪಾಕ್ಷ ಭಕ್ತರ ಪೊರೆವವಳು ॥ 4 ॥

## 7.2 ಗಂಗಾಷ್ಟಮಿ ಹಾಡು

ಶ್ರೀಹರಿ ಗಣಪತಿ । ಬಿಂದು ಮಾಧವರ । ಕಾಲಭೈರವರ ಪಾದಕೆ ನಮೋ ಎಂಬೆ । ಶ್ರೀ ರಾಮ ಕಾಶಿ ಆನಂದ ಮೂರುತಿ । ಸಾಯುಜ್ಯ ಪದನವ ಪೇಳುವೆನಿಂತೆಂದು ।
ಶ್ರೀ ರಾಮ ರಾಮ ಜಯ ಜಯ ॥ ಪ ॥

ಶ್ರೀ ರಾಮ ಕಾಶಿ । ಶ್ರೀ ರಾಮ ಕಾಶಿ । ಶ್ರೀರಾಮ ಕಾಶಿಯಲಿ । ಸಲಹೆ ಭವಾನಿ ಶಂಕರರೆ ।
ಶ್ರೀ ರಾಮ ರಾಮ ಜಯ ಜಯ ॥ ಅ.ಪ ॥

ನೀಲವರ್ಣದ ಗಂಗೆ । ಕಾವಡಿಯಲಿ ತುಂಬಿ । ಆನಂದದಿಂದಲೆ ಹೆಗಲ ಮೇಲಿಟ್ಟು ।
ಹಾಲವರ್ಣದ ಗಂಗೆ । ಕಾವಡಿಯಲಿ ತುಂಬಿ । ಅನಂದದಿಂದಲೆ ಹೆಗಲ ಮೇಲಿಟ್ಟು ।
ಶ್ರೀ ರಾಮ ಲಿಂಗಕ್ಕೆ ಅಭಿಷೇಕವ ಮಾಡಿ । ಸ್ವಾಮಿ ವಿಶ್ವೇಶ್ವರರೆಂತು ಪೊಗಳುವೆನು ।
ಶ್ರೀರಾಮ ರಾಮ ಜಯ ಜಯ ॥ 1 ॥

ಮುನ್ನೂರು ಮೂವತ್ತು ಕೋಟಿ ಜನರೆಲ್ಲ । ನಿನ್ನ ಕೀರ್ತಿಯ ಕೇಳಿ ಬಂದೆ ಭವಾನಿ ।
ಇನ್ನು ಸಂಸಾರದ ಯೋಚನೆಗಳ ಬಿಡಿಸಿ । ನಿನ್ನೊಳಗೈಕ್ಯವ ಮಾಡೆ ಭವಾನಿ ।
ಶ್ರೀರಾಮ ರಾಮ ಜಯ ಜಯ ॥ 2 ॥

## 7.3 ಗಂಗೆಯಲ್ಲಿ ವರ ಬೇಡಿದ್ದು

ಭಾಗ್ಯವ ಕೊಡೆ ತಾಯೆ । ಭಾಗೀರಥಿ ॥ ಪ ॥

ಹರಿಪಾದನಖದಿಂದ ಹರಿದು ಬಂದಳೆ ಗಂಗಾ ।
ಪರಮ ಭಕ್ತರ ಸಂಗ ವರವನ್ನೆ ಕೊಡು ತುಂಗ ॥ 1 ॥

ಕಾಶಿ ಪಟ್ಟಣದೊಳು । ವಾಸವಾಗಿರುವೆ ।
ಆ ಮಹಾ ಜನರಿಗೆ ವರವನ್ನೆ ಕೊಡು ತಾಯೆ ॥ 2 ॥

ಕಮಲೇಶ ವಿಠಲನ । ಮಮತೆಯ ಮಗಳೆ ನೀ ।
ಉತ್ತಮಳು  ಎಂದು ಭ್ರಮಿಸಿ ಬಂದೆನು ತಾಯೆ ॥ 3 ॥

----- ****** -----

# 8 ದೀಪಾವಳಿ

## 8.1 ಗೋಪೂಜೆಯ ಹಾಡು

ಧೇನುವಿನರ್ಚನೆಯ । ನೋಡುವ ಬನ್ನಿ । ಮಾನವರೆಲ್ಲವರು । ಪ್ರಾಣರಕ್ಷಕ ಸುರ ಧೇನು ।

ಕಾಮಿತ ಫಲ । ದಾನವೀವುದು ಸೇವಾ ಸರ್ವ ದೇವಾತ್ಮಕ ॥ ಪ ॥

ಆದಿಯೊಳ್ ಸಂಕಲ್ಪಿಸಿ । ಸಂಗಡಲೆ ಆ । ಮೋದಕ ಪ್ರಿಯನರ್ಚಿಸಿ । ಭೇದವಿಲ್ಲದೆ

ಶಂಖದಾದಿಯೊಳ್ ಕಲಶವ । ಮೋದದಿಂ ಕಡೆಯೊಳಾತ್ಮನ ಪೂಜಿಸೆಸಗುವ ॥ 1 ॥

ಗೋದೇವಿ ಶ್ರೀಮತಿಯೆ । ಸೌರಭೆ ಬ್ರಹ್ಮ । ನೋದರ ಜಾತೆ ಶ್ರೀಯೆ ।

ಮಾಧವಗತಿ ಪ್ರಿಯೆ । ಆದರಿಸೆಲೆ ತಾಯೆ ।

ಹೇ ದಯಾಂಬುಧಿಯೆ ಎಂದೀಗ ಪ್ರಾರ್ಥಿಸಿ ಗೈವ ॥ 2 ॥

ವತ್ಸನ ಸಹಿತಲೀಗ । ಅರ್ಚಿಸುತಿಹ ಉತ್ಸವ ನೋಡಿ ಬೇಗ ।

ಮುತ್ತು ರತ್ನಗಳಾಸನದೊಳು ಆವಾಹಿಸುತಾಗ ।

ಪ್ರತ್ಯಕ್ಷವಿಹ ಸರ್ವ ವಸ್ತ್ವಾತ್ಮಕಳಾದ ॥ 3 ॥

ಪೂಗಿ ಫಲದ ಹಾರವ । ಕೊರಳೊಳಗಿಟ್ಟರೀಗ ಚೆಂದವ ನೋಡುವ ।

ಮೈಗೆಲ್ಲ ರಜತ ಸುವರ್ಣಗಳಿಂದನುರಾಗ । ತೋರುವ ತೆರ ಮುದ್ರೆಯಿಕ್ಕಿರುವಂಥ ॥ 4 ॥

ಸರ್ವಹಿತೈಷಿಣಿಗೆ । ಪಾದ್ಯವನಿತ್ತು । ಸರ್ವ ತೀರ್ಥೇಶ್ವರಿಗೆ । ಶರ್ವಪ್ರಿಯಳಿಗರ್ಘ್ಯ

ದುಪಚಾರವನೀಗ । ಪರ್ವ ಕಾಲದಿ ಚಾತುರ್ವರ್ಣದೊಳಗೆಸಗುವ ॥ 5 ॥

ಆಚಮನೋಪಚಾರ । ಗೈಯಲು ಪಾಪ ಮಾಚುವುದೆಂದರಿದ । ಊಚು ನೀಚುಗಳ್

ಪರಿ ಭಾವವಳಿದಾ ಸ್ನಾನ । ವಾಛಾದನಕೆ ನೂತನದ ವಸ್ತ್ರವೀಯುತ್ತ ॥ 6 ॥

ಕುಂಕುಮ ಶ್ರೀಗಂಧವ । ಕಸ್ತೂರಿ ಮಿಶ್ರ । ಕಿಂಕರರರ್ಪಿಸೀಗ । ವೆಂಕಟಾತ್ಮಕಳಿಗೆ

ಪಂಕಜ ಪುಷ್ಪವ । ಅಲಂಕರಿಸಿಹ ಪೂಗಿ ಸುಮವ ಪರಿಪರಿಯಿಂದ ॥ 7 ॥

ಅಷ್ಟ ಗಂಧದಿ ಮಿಶ್ರಿತ ಗುಗ್ಗುಳ ಧೂಪ । ಶಿಷ್ಟರರ್ಪಿಸುವ ಧೂಪ । ನಿಷ್ಟೆಯಿಂ ಪರಿ
ಪರಿ ಭಕ್ಷ್ಯಂಗಳೆಸಗಿ ತಂ । ದಷ್ಟು ನಿವೇದಿಸಿ । ಗ್ರಾಸಕೀಯುವ ಅರ್ತಿ ॥ 8 ॥

ಕ್ಷೀರಾರ್ಣವದಿ ಜನಿಸಿ । ದಾಕೆಗೆಯೀಗ । ನೀರಾಜನವ ಅರ್ಪಿಸಿ । ನಾರದಾದಿಗಳ್ವಾಸ
ಸೌರಭೆ ನಿನಗೀಗ । ಚಾರು ವೇದದಿ ಪುಷ್ಪಾಂಜಲಿ ಸಮರ್ಪಣೆಯೆಂಬ ॥ 9 ॥

ಶೃಂಗವೆರಡಿಹುದು ಶೋಭೆ । ಬ್ರಹ್ಮನು ವಿಷ್ಣು । ಕಂಗೊಳಿಸುವರು ನೋಡೆ ।
ಲಾಂಗುಲಿಯೊಳು ತಾರೆ । ಕಂಗಳೊಳ್ಶಶಿ ಸೂರ್ಯ । ಅಂಗಾಂಗಗಳಲೆಲ್ಲ ।
ವೃಂದಾರಕಮಯೆ ॥ 10 ॥

ಎಂದು ಈ ಪರಿ ಧ್ಯಾನವ । ಗೈಯುತಲೀಗ । ವಂದನಾದ್ಯುಪಚಾರವ ।
ಚಂದದಿಂದೆಸಗಿ ಆ । ನಂದದಿಂದೆಲ್ಲವ । ರೊಂದಾಗಿ ಪೂಜಾ ಪ್ರ ।
ಸಾದ ಸ್ವೀಕರಿಸುವ ॥ 11 ॥

ಕಾಮಧೇನುವೇಯಿದುವು । ಸೇವೆಯ ಗೈಯೆ । ಕಾಮಿತ ನೀಡುವುದು । ಮಾನವರಾಲಿಸಿ
।
ಗೋವ ಪೀಡಿಸಿದರೆ । ಕ್ಷೋಣಿಯೊಳ್ಜನ್ಮ ಜನ್ । ಮಕು ಕಷ್ಟ ದಾರಿದ್ರ್ಯ ॥ 12 ॥

ಗೋಹತ್ಯ ಗೈಯಲಿಕೆ । ಕಲ್ಪಾಂತವು । ಗೇಹವು ನರಕದೊಳೆ । ಆವಿಗೆ ಕೆಡು
ನುಡಿಯಲು ।
ರೋಗದ ಬಾಧೆ । ಗೋಸೇವೆಯೆ ಆತ್ಮಾ । ರಾಮನ ಸೇವೆಯು ॥ 13 ॥

## 8.2 ಗೋವಿನ ಹಬ್ಬದ ಹಾಡು

ಪಟ್ಟೆಯ ಸೀರೆಯ ಬೆಳಕೆ । ಮುತ್ತಿನ ಒಡ್ಯಾಣದ ಬೆಳಕೆ ॥
ಇಂದು ಗೋ ತಾಯಿಯ ಬೆಳಕು ತುಂಬಿತು ಮನೆಯೊಳಗೆ ॥ 1 ॥

ಶಾಲಿಯ ಶೀರೆಯ ಬೆಳಕೆ । ನೀಲದೊಡ್ಯಾಣದ ಬೆಳಕೆ ॥
ಈಗ ಗೋ ತಾಯಿಯ ಬೆಳಕು ತುಂಬಿತು ಮನೆಯೊಳಗೆ ॥ 2 ॥

ಜಯವಾಗಲಿ ಈ ಮನೆಗೆ । ಜಯವಾಗಲಿ ಈ ಗೃಹಕೆ ॥
ಜಯವಾಗಲಿ ಎಂದು । ಬಂದು ದೇವರಿಗೆರಗಿದರೆ ॥ 3 ॥

ಶುಭವಾಗಲಿ ಈ ಮನೆಗೆ । ಶುಭವಾಗಲಿ ಈ ಗೃಹಕೆ ॥
ಶುಭವಾಗಲಿ ಎಂದು । ಬಂದು ದೇವರಿಗೆರಗಿದರೆ ॥ 4 ॥

## 8.3 ಗೋವಿಗೆ ನೈವೇದ್ಯ

ತಂದು ನೀಡಿದಳು ಗೋಪಿ । ಗೋಗ್ರಾಸವ ॥ ಪ ॥
ತಂದು ನೀಡಿದಳ್ ಪಾದದ್ವಂದ್ವಕ್ವಂದಿಸಿ ।
ಮುದದಿಂದ ಭುಂಜಿಸಿ ನಿನ್ನೆಂಜಲ ಕೊಡು ಎಂದು ॥ ಅ.ಪ ॥

ನಂದಗೋಪನು ಮುದದಿ । ಗೋವಿನ ಪೂಜೆ । ಬಂದು ಮಾಡಲು ಭರದಿ ।
ಗಂಧ ಚಂದನ ನೀಡಿ । ಧೂಪ ದೀಪವ ತೋರಿ ।
ತಂದು ನೈವೇದ್ಯ ತಾಂಬೂಲ ಸಮರ್ಪಿಸಿ ॥ 1 ॥

ಸಣ್ಣ ಶ್ಯಾವಿಗೆ ಬಟುವಿ । ತಣ್ಣನೆ ಕ್ಷೀರ ಎಣ್ಣ್ಯೋಳಿಗೆ ಮಂಡಿಗೆ । ಹಣ್ಣು ಹಂಪಲ ಹರಿ
।
ವಾಣದೊಳಗೆ ತುಂಬಿ । ಉಣ್ಣು ಉಣ್ಣೆನುತಾಲೆ । ಬಣ್ಣಿಸಿ ಗೋವಿಗೆ ॥ 2 ॥

ಅರೆದ ಸಕ್ಕರೆ ಪೇಢೆಯು । ಕೂಡಿರಿಸಿದ ಕರಿದ ಲಡ್ಡಿಗೆ ಉಂಡೆಯು ।
ಪರಮ ಪಾವನೆ ನೀನು । ಭುಂಜಿಸಬೇಕೆಂದು । ಶಿರವನೆರಗಿ ಕರ ।
ಮುಗಿದು ಪ್ರಾರ್ಥಿಸುವೆನು ॥ 3 ॥

## 8.4 ಗೋವಿಗೆ ಆರತಿ

ಆರತಿ ಶುಭದಾರತಿ । ಮಂಗಳಾರತಿ ಗೋಮೂರುತಿ । ಆರತಿಯ ನಾ ತೋರಿ ಪಾಡುವಿ
।
ನಾರಿ ಗುಣವ ಸುಕೀರುತಿ ॥ 1 ॥

ಮಂಗಳಾಂಗಿಯೆ । ರಂಗು ಶೋಭೆಯೆ । ರಂಗನಾಯಕ ಪ್ರೀತಳೆ ।
ಅಂಗದೊಳಗಣ ರೋಮ ಕೋಟಿಯೊಳ್ । ಹೊಂದಿಹರು ದೇವಾದ್ಯರೆ ॥ 2 ॥

ಕ್ಷೋಣಿಯೊಳು ಭಜಕರಿಗೆ ನೀನೆ । ಕಾಮಧೇನು ಎಂದೆನಿಸಿಹೆ ।
ಕಾಮಕರ್ಮಿಗಳು ಹೋಮ ದ್ರ್ಯವ್ಯವ । ಪ್ರೇಮಿಸೀಯುವ ಮಾತೆಯೆ ॥ 3 ॥

ಸರ್ವ ದೇವ ಸ್ವರೂಪ । ಸಚರಾಚರಕು ಪ್ರಾಣ ಪ್ರದೀಪೆಯೆ ।
ನಿರಗರಾತ್ಮಾರಾಮ ನಿನ್ನೊಳು । ಪ್ರಸನ್ನ ರೂಪದೊಳಿರುವನೆ ॥ 4 ॥

## 8.5 ಗೋವಿನಲ್ಲಿ ಹೂ ಬೇಡಿದ್ದು

ಕರುಣೆಸೆನಗೆ ಸುಮವ । ಗೋಮಾತೆಯೆ ॥ ಕರುಣಿಸು ಕರುಣಿಸು ಶಿರದಿ ಶೋಭಿಸುವುದ
।
ಗುರುತರವಾಗಿಹ ಪರಿಪರಿ ಸುಮವ ॥ 1 ॥

ಲೋಕಪಾವನ ಮಾತೆ । ಗೋಮಾತೆ । ಕಾಕು ಗುಣದ ಹರ್ತೆ ।
ನಾಕವು ಶಿರದಲ್ಲಿ । ವ್ಯಾಪಿಸಿ ಇರಲಲ್ಲಿ । ರಾಕೆಂದು ಈ ನಂದ ಇಪ್ಪ ಆ ಮಲ್ಲಿಕ ॥
2 ॥

ಸುರನರ ಚರ ವೃಂದ । ಹೃದಯದೊಳಿರಿಸಿ ಪಾಲಿಪ ಚಂದ ।
ವರತ್ರೈಮೂರ್ತಿಗಳುದ್ಧರಿಸಿಹ ಅಂಗ । ಸುರಜಾತ ಸುರಪಾರಿಜಾತ ಪುನೀತ ॥ 3 ॥

ವಂದಿಸಲಂಬಿಕೆಗೆ । ಪಾವನ ಪೊಂದಿಸುವಳೆ ಮುದದಿ । ಪೊಂದಿ ಪ್ರಸಾದವ ।
ನಂದಾತ್ಮರಾಮನ । ಸುಂದರ ಪದ ಬೆರೆಸುವ ಕಿರಿ ಕೇದಿಗೆ ॥ 4 ॥

----- ****** -----

# 9 ತುಳಸಿ ಪೂಜೆ

## 9.1 ತುಳಸಿ ಪೂಜೆ

ಪೂಜಿಪೆ ಶ್ರೀ ತುಳಸಿ । ಶ್ರೀ ಹರಿಯರಸಿ । ಪೂಜಿಪೆ ಶ್ರೀ ತುಳಸಿ ।
ಪೂಜಿಪೆನು ನಾ ಪಾದದಾಸಿ । ರಾಜಮಹಿಷಿ ರಾಜ್ಯದರಸಿ ।
ಮೂಜಗದಿ ವಿಖ್ಯಾತೆ ಮನ್ನಿಸಿ । ಕಾವುದ್ಯೆ ಬೇಡುವೆನು ವಂದಿಸಿ ॥ ಪ ॥

ಎಳೆ ಮಾವು ತಳಿರುಗಳಾ । ಕದಳಿಯು ಕಬ್ಬು । ಬಿಳಿದಾದ ಚಿಗುರುಗಳಾ ।
ಜಲದೊಳಿರುತಿಹ ತಾವರೆಗಳಾ । ಚೆಲುವ ಕೇದಿಗೆ ಸಂಪಿಗೆಗಳಾ ।
ಹಲವು ಸುಮ ಮಾಲೆಗಳ ಕೂಡುತ । ಮಂಟಪವ ರಚಿಸುತ್ತ ಮುದದಿ ॥ 1 ॥

ಧ್ಯಾನ ಆವಾಹನವೂ । ಆಸನ ಪಾದ್ಯ । ಅರ್ಘ್ಯ ಆಚಮನಗಳೂ ।
ಸ್ನಾನ ಗಂಧಾಕ್ಷತವು ಪುಷ್ಪವು । ಧೂಪ ದೀಪವು ನೈವೇದ್ಯಗಳೂ ।
ಪಾನೀಯವು ತಾಂಬೂಲ ಕರ್ಪೂರ । ದಾರತಿಯ ನಾ ನೀಡಿ ಭಕ್ತಿಯೊಳು ॥ 2 ॥

ಸರ್ವ ಮಂಗಳೆ ನೀ ಎನ್ನಾ । ಸರ್ವದಾ ಕಾಯೆ । ಗರ್ವವ ಹರಿಸಿ ಮುನ್ನ ।
ಸರ್ವ ಕಷ್ಟವ ದೂರಪಡಿಸುತ । ಸರ್ವ ಭಾಗ್ಯವನಿತ್ತು ಕರುಣಿಸಿ ।
ಸರ್ವರಂತರ್ಯಾಮಿ ಸೇವೆಯ । ಭಕ್ತಿಯನು ನೀ ನೀಡಿ ಸಲಹ್ಯೆ ॥ 3 ॥

## 9.2 ತುಳಸಿಗೆ ಆರತಿ

ಬೆಳಗುವೆ ನಾ । ನಾರತೀಯ । ತುಳಸಿಗೆ ಶ್ರೀಕೃಷ್ಣಗೆ ।
ನಳಿನನಾಭ ಹರಿಯುಗಳದಿ । ಮೆರೆಯುತಿರುವ ದೇವಿಗೆ ॥ ಪ ॥

ಸೃಷ್ಟಿಯೊಳೂ । ಶ್ರೇಷ್ಠವೆಂದು । ಶಿಷ್ಟರೆಲ್ಲ ಗಣಿಸುತ । ಕಟ್ಟೆ ಕಟ್ಟಿ ನೀರನೆರೆವ ।
ವಿಷ್ಣುಪ್ರೀತಿದಾತೆಗೆ ॥ 1 ॥

ಉದಯದೊಳೂ । ಮುದದೊಳೆದ್ದು । ವಿಧಿಯೊಳರ್ಚಿಸುವರಿಗೆ ।
ವಿಧವಿಧೈಶ್ವರ್ಯಗಳನಿತ್ತು । ಸದಯದೀ ರಕ್ಷಿಪಳಿಗೆ ॥ 2 ॥

ತುಪ್ಪದಲೀ । ತೋಯಿಸಿರುವ । ಒಪ್ಪವಾದ ಜ್ಯೋತಿಯಾ ।
ಮತ್ತೆ ಕರ್ಪೂರದಾರತೀಯ । ಅರ್ಪಿಸೂವೆ ನಿನಗೆ ನಾ ॥ 3 ॥

ಜಯತು ಜಯ । ತುಳಸಿ ಮಾತೆ । ಜಯತು ವಿಶ್ವಮಾನಿತೆ ।
ಜಯತು ಜಗದಿ ಖ್ಯಾತೆ ಪೂತೆ । ಸರ್ವಭಾಗ್ಯದಾತೆಯೇ ॥ 4 ॥

## 9.3 ತುಳಸಿ ಕಲ್ಯಾಣ

ಕಲ್ಯಾಣವೆ ತುಳಸಿ ಕಲ್ಯಾಣವೆ ॥ ಪ ॥
ಕಲ್ಯಾಣವೆ ನಮ್ಮ ರಂಗನ ಅರಸಿಗೆ । ಕೃಷ್ಣ ಶ್ರೀ ತುಳಸಿಗೆ ।
ಕಲ್ಯಾಣವೆ ವೃಂದಾವನ ದೇವಿಗೆ ॥ ಅ.ಪ ॥

ಅಂಗಳದೊಳಗೆಲ್ಲ ವೃಂದಾವನವ ಮಾಡಿ । ಶೃಂಗರಿಸಿದರಾ ಮಂಟಪಕೆ ।
ಕಂಗಳ ಪಾಪವ ಪರಿಹರಿಸುವದ ಹ್ಯಾಂಗೆ । ರಂಗ ಬಂದಿಲ್ಲೇ ನೆಲೆಸಿಹನು ॥ 1 ॥

ಸಾರಿಸಿ ರಂಗವಲ್ಲಿಯನಿಕ್ಕಿ ಚಂದದಿ । ವಾರಣ ತೋರಣಂಗಳ ರಚಿಸಿ ।
ನಾರಾಯಣರ ಮಂಟಪದೊಳಗೊಪ್ಪುವ । ಭೂವೈಕುಂಠವೆ ದೊರಕುವುದು ॥ 2 ॥

ಒಂದು ಪ್ರದಕ್ಷಿಣೆಯನು ಮಾಡಿದವರಿಗೆ । ಅಷ್ಟ ಸೌಭಾಗ್ಯವ ಕೊಡುತಿಹಳು ।
ಮುತ್ತಿನಾರತಿ ಎತ್ತಿ ಕೈಮುಗಿದವರಿಗೆ । ವಾಲೆ ಸೌಭಾಗ್ಯವ ಕೊಡುತಿಹಳು ॥ 3 ॥

ಹತ್ತು ಪ್ರದಕ್ಷಿಣೆಯನು ಮಾಡಿದವರಿಗೆ । ಅಷ್ಟ ಸೌಭಾಗ್ಯವ ಕೊಡುತಿಹಳು ।
ಮುತ್ತಿನಾರತಿ ಎತ್ತಿ ಕೈಮುಗಿದವರಿಗೆ । ಅಷ್ಟ ಸೌಭಾಗ್ಯವ ಕೊಡುತಿಹಳು ॥ 4 ॥

----- ****** -----

# 10 ಹನುಮಂತ

## 10.1 ಹನುಮಾನ ಸ್ತುತಿ

ನೀ ಎನ್ನನು ಕಾಯಬೇಕಯ್ಯಾ । ಶ್ರೀ ಆಂಜನೇಯಾ ॥ ಪ ॥

ನೀ ಎನ್ನನು ಕಾಯಬೇಕು । ನಾನು ನಿನ್ನನು ಭಜಿಸಬೇಕು ।

ನಾನು ನೀನೂ ಒಂದು ಗೂಡಿ । ರಾಮ ಭಜನೆಯ ಮಾಡಬೇಕು ॥ ಅ.ಪ ॥

ಮತ್ಸರದ ಸಂಸಾರ ಜಲಧಿ । ರಾಮ ನಾಮದ ನೌಕೆಯಲ್ಲಿ ॥

ದಾಟ ಹೊರಟಿಹ ಪಯಣಿಗ ನಾನು । ಅಂಬಿಗ ನೀನು ದಾಟಿಸಯ್ಯಾ ॥ 1 ॥

ಆ ಜನ್ಮ ಬ್ರಹ್ಮಚಾರಿ । ಅಪ್ರತಿಮ ಬಲಶಾಲಿ ನೀನು ।

ರಾಮ ಭಜನೆಯ ಭಂಡಾರವನು । ಲೋಕಕ್ಕೆಲ್ಲಾ ತೋರಿದಾತಾ ॥ 2 ॥

----- ****** -----

# 11 ಮಂಗಳ ಕಾರ್ಯ

## 11.1 ನಿರ್ವಿಘ್ನ ಗಣಪತಿ ಪೂಜೆ

ಗುರುಗಣಪತಿಗೆರಗುವೆನು । ಸಿರಿ ಚರಣಕೆ ನಮಿಸುವೆನು ॥
ನೆನೆದಿಹ ಕಾರ್ಯಕೆ । ಬೇಡುವೆ ನಿರ್ವಿಘ್ನವನು ॥ ಪ ॥

ಮನೆದೇವರಿಗೆರಗುವೆನು । ಕುಲದ ಸ್ವಾಮಿಯ ಸ್ಮರಿಸುವೆನು ॥
ನೆನೆದಿಹ ಕಾರ್ಯಕೆ । ಬೇಡುವೆ ನಿರ್ವಿಘ್ನವನು ॥ 1 ॥

ಅಷ್ಟ ದಿಕ್ಕಿನ ದೇವರಿಗೂ । ಸೃಷ್ಟಿಗೊಡೆಯ ಕೃಷ್ಣನಿಗೂ ॥
ಶಿಷ್ಟರ ಪೊರೆವಗೆ । ಅಷ್ಟಾಂಗದಿ ವಂದಿಪೆನು ॥ 2 ॥

ಮಂಗಲ ಮೂರ್ತಿಯೆ ನಿನ್ನ । ಅಂಗಕೆ ವಂದಿಪೆ ಮುನ್ನ ॥
ಮಂಗಲ ಕಾರ್ಯಕೆ । ಬೇಡುವೆ ಗುಣ ಸಂಪನ್ನ ॥ 3 ॥

## 11.2 ಅಕ್ಕಿ ತೊಳಸಿದ್ದು

ಸಿದ್ಧಿವಿನಾಯಕ ಸಿದ್ಧವನು ಮಾಡಯ್ಯಾ । ಸಿದ್ದೆಳ್ಳು ಕಡಲೆ ನಿನಗೀವೆ ।
ಸಿದ್ದೆಳ್ಳು ಕಡಲೆ ನಿನಗೀವೆ ಗಣಪಯ್ಯಾ । ಶೀಘ್ರದಲಿ ಮತಿಯಾ ಕರುಣೀಸು ॥ ಪ ॥
॥ ಸೂವಿ ಸೂವಿ ಸೂವಾಲ್ಯ ॥

ಕಾರ್ಯವಿನಾಯಕ ಕಾರ್ಯವನು ಮಾಡಯ್ಯಾ । ಕಾರೆಳ್ಳು ಕಡಲೆ ನಿನಗೀವೆ ।
ಕಾರೆಳ್ಳು ಕಡಲೆ ನಿನಗೀವೆ ಗಣನಾಥ । ಕಾರ್ಯದಲಿ ಮತಿಯಾ ಕರುಣೀಸು ॥ 1 ॥
॥ ಸೂವಿ ಸೂವಿ ಸೂವಾಲ್ಯ ॥

ಅಂದವುಳ್ಳೊರಳಿಗೆ ಚಂದ ಧೂಪವ ತೋರಿ । ಚಂದದಲಿ ಶಿವನ ಬಲಗೊಂಡು ॥
ಚಂದದಲಿ ಶಿವನ ಬಲಗೊಂಡು ನಾರಿಯರು । ಅಕ್ಕಿ ತೊಳಿಸಿದರೆ ಮದುವೀಗೆ ॥
ಸೂವಿ.. ॥

ಅಕ್ಕೀಯ ತೊಳಿಸುತ್ತ ಮುತ್ತ ಬೆಲೆ ಮಾಡುತ್ತ । ಶುಕ್ರಮರ ಕದುರ ಬರೆಯುತ್ತ ।
ಶುಕ್ರಮರ ಕದುರ ಬರೆಯುತ್ತ ನಾರಿಯರು । ಅಕ್ಕಿ ತೊಳಿಸಿದರೆ ಮದುವೀಗೆ ॥ ಸೂವಿ ॥

ಗೋಧಿಯ ತೊಳಿಸುತ್ತ ಹೂವ ಬೆಲೆ ಮಾಡುತ್ತ । ಸೂರ್ಯಮರ ಕದುರ ಬರೆಯುತ್ತ ।
ಸೂರ್ಯಮರ ಕದುರ ಬರೆಯುತ್ತ ನಾರಿಯರು । ಗೋಧಿ ತೊಳಿಸಿದರೆ ಮದುವೀಗೆ ॥ ಸೂವಿ ॥

ಅಕ್ಕಿ ಕರೀ ಅಕ್ಕಿ । ಅಕ್ಕಿ ಬೆಳ್ಳಿ ಅಕ್ಕಿ । ಅಕ್ಕೀಯ ತೊಳೆದ ಹಣಿನೀರು ।
ಅಕ್ಕೀಯ ತೊಳೆದ ಹಣಿನೀರ್ಕೊಂಬ್ವಲೆ ಬಂದ । ಹಕ್ಕಿ ಹೇಳಿದವೆ ಶಕುನವ ॥ ಸೂವಿ ॥

ಗೋಧಿ ಕರೀ ಗೋಧಿ । ಗೋಧಿ ಬೆಳ್ಳಿ ಗೋಧಿ । ಗೋಧಿಯ ತೊಳೆದ ಹಣಿನೀರು ।
ಗೋಧಿಯ ತೊಳೆದ ಹಣಿನೀರ್ಕೊಂಬ್ವಲೆ ಬಂದ । ಹಕ್ಕಿ ಹೇಳಿದವೆ ಶಕುನವ ॥ ಸೂವಿ ॥

ಆಚೆ ಕೊಂಬೆಯ ಪಕ್ಷಿ । ಈಚೆ ಕೊಂಬೆಗೆ ಹಾರಿ । ಮಾತು ಮಾತಿನಲಿ ಸ್ವರಗೈವ ।
ಮಾತು ಮಾತಿನಲಿ ಸ್ವರಗೈವ ಆ ಪಕ್ಷಿ । ಅಣ್ಣಗೆ ಹೇಳಿದವೆ ಶಕುನವ ॥ ಸೂವಿ ॥

ಎಡದ ಕೊಂಬೆಯ ಪಕ್ಷಿ । ಬಲದ ಕೊಂಬೆಗೆ ಹಾರಿ । ಹೊನ್ನ ತಾವರೆಯ ಎಲೆ ಮೇಲೆ ।
ಹೊನ್ನ ತಾವರೆಯ ಎಲೆ ಮೇಲೆ ಆ ಪಕ್ಷಿ । ಅಣ್ಣಗೆ ಹೇಳಿದವೆ ಶಕುನವ ॥ ಸೂವಿ ॥

ಪಟ್ಟೆ ಧೋತ್ರವನೊದ್ದು ಅಪ್ಪ ಶಕುನಕೆ ಹೊರಟ । ಮುತ್ತಿನ ಪಕ್ಷಿ ಅವು ಮೂರು ।
ಮುತ್ತಿನ ಪಕ್ಷಿ ಅವು ಮೂರು ಒಂದಾಗಿ । ಅಪ್ಪಗೆ ಹೇಳಿದವೆ ಶಕುನವ ॥ ಸೂವಿ ॥

ಘಟ್ಟದ ಕೆಳಗಿನ ಗಟ್ಟಿ ಬಿದಿರನೆ ತರಿಸಿ । ತಟ್ಟು ತಟ್ಟೆಸೆವ ಮೊರನವ ।
ತಟ್ಟು ತಟ್ಟೆಸೆವ ಮೊರನವ ಪಿಡಕೊಂಡು । ಮಿತ್ರೆಯರಕ್ಕಿ ಹಸಮಾಡೆ ॥ ಸೂವಿ ॥

ಕೇರಿಯ ಕೆಳಗನ ಬೇರುಳ್ಬಿದಿರನೆ ತರಿಸಿ । ಗಣ್ಣು ಗಣ್ಣೆಸೆವ ಮೊರನವ ।
ಗಣ್ಣು ಗಣ್ಣೆಸೆವ ಮೊರನವ ಪಿಡಕೊಂಡು । ನಾರಿಯರಕ್ಕಿ ಹಸಮಾಡೆ ॥ ಸೂವಿ ॥

ಚಪ್ಪರವ ಕಟ್ಟಿಸಿದ ಒಪ್ಪವನು ನೋಡೀಗ । ಚಪ್ಪರಕು ಮನೆಗೂ ತಿರುಗೀದ ।
ಚಪ್ಪರಕು ಮನೆಗೂ ತಿರುಗೀದ । ಅಪ್ಪಯ್ಯನವರ ಕಂಡು ಅಕ್ಕಿ ಹಸಮಾಡೆ ॥ ಸೂವಿ ॥

ಚಾವಡಿಯ ಕಟ್ಟಿಸಿದ ಆಯವನು ನೋಡೀದ । ಚಾವಡಿಗು ಮನೆಗೂ ತಿರುಗೀದ ।
ಚಾವಡಿಗು ಮನೆಗೂ ತಿರುಗೀದ । ಅಣ್ಣಯ್ಯನವರ ಕಂಡು ಅಕ್ಕಿ ಹಸಮಾಡೆ ॥ ಸೂವಿ ॥

## 11.3 ಅಕ್ಷತೆ ಕಲಸಿದ್ದು

ಸಿದ್ಧಿವಿನಾಯಕ ಸಿದ್ಧಿಯನು ಮಾಡಯ್ಯಾ । ಸಿದ್ದೆಳ್ಳು ಕಡಲೆ ನಿನಗೀವೆ ।
ನಿನಗೀವೆ ಗಣನಾಥ । ಶೀಘ್ರದಲಿ ಮತಿಯಾ ಕರುಣೀಸು ॥ ಪ ॥

ಕಾರ್ಯವಿನಾಯಕ ಕಾರ್ಯವನು ಮಾಡಯ್ಯಾ । ಕಾರೆಳ್ಳೂ ಕಡಲೆ ನಿನಗೀವೆ ।
ನಿನಗೀವೆ ಗಣನಾಥ । ಕಾರ್ಯದಲಿ ಮತಿಯಾ ಕರುಣೀಸು ॥ ಅ.ಪ ॥

ಹೊಸ್ತಲಿನ ಗಣಪತಿಗೆ ತುಪ್ಪ ಸಕ್ಕರೆ ಇಕ್ಕಿ । ಒಪ್ಪದಿ ನಮ ಕಾರ್ಯ ಕೈಗೂಡಿ ।
ಕೈಗೂಡಿ ಬರಲೆಂದು । ಹೊಸ್ತಲಿನ ಗಣಪತಿಗೆ ಎರಗುವೆ ॥ 1 ॥

ಬಾಗಿಲಿನ ಗಣಪತಿಗೆ ಹಾಲು ಸಕ್ಕರೆ ಇಟ್ಟು । ಚಂದದಿ ನಮ ಕಾರ್ಯ ಕೈಗೂಡಿ ।
ಕೈಗೂಡಿ ಬರಲೆಂದು । ಬಾಗಿಲಿನ ಗಣಪತಿಗೆ ಎರಗುವೆ ॥ 2 ॥

ಹತ್ತು ಕೊಳಗಕ್ಕಿ ಹತ್ತು ತೆಂಗಿನಕಾಯಿ । ಇಟ್ಟು ದೇವರಿಗೆ ನಮೋ ಎಂದು ।
ನಮೋ ಎಂದು ನಮ್ಮ ಕಾರ್ಯ । ಚಂದದಿ ಕೈಗೂಡಿ ಬರಬೇಕು ॥ 3 ॥

ಆರು ಕೊಳಗಕ್ಕಿ ಆರು ತೆಂಗಿನಕಾಯಿ । ಮಡಗಿ ದೇವರಿಗೆ ನಮೋ ಎಂದು ।
ನಮೊ ಎಂದು ನಮ್ಮ ಕಾರ್ಯ । ಚಂದದಿ ಕೈಗೂಡಿ ಬರಬೇಕು ॥ 4 ॥

ಅಕ್ಷತೆಯ ಕಲಿಸುವಲೆ ಅಕ್ಕವ್ವನ ಬರಹೇಳಿ । ಎಪ್ಪತ್ತು ಕೀಲು ಸರಿಗೆಯ ।
ಸರಿಗೆಯ ಇಕ್ಕಿದ್ದ । ಅಕ್ಕವ್ವನ ಬೇಗ ಬರಹೇಳಿ ॥ 5 ॥

ಆರತಿಯ ಎತ್ತುವಲೆ ತಂಗವ್ವನ ಬರಹೇಳಿ । ಇನ್ನೂರು ಕೀಲು ಸರಿಗೆಯ ।
ಸರಿಗೆಯ ಇಟ್ಟಿದ್ದ । ತಂಗವ್ವನ ಬೇಗ ಬರಹೇಳಿ ॥ 6 ॥

ಅಕ್ಷತವ ಕಲಸುವಲೆ ಅಕ್ಕ ಒಂದಲ್ಲದೆ । ವೃತ್ತಿಯಲ್ಲಿರುವ ಅಳಿಯಗೂ ।
ಅಳಿಯಗೂ ಮಗಳಿಗೂ । ಬೇಗೊಂದು ಓಲೆ ಕಳುಹಿಸಿ ॥ 7 ॥

ಅಕ್ಷತವ ಕಲಿಸುವಲೆ । ಮತ್ತ್ಯಾರ ಬಲಗೊಂಬಿ । ಚೊಚ್ಚಲು ಹಿರಿಯ ಕುವರನ ।
ಕುವರ ಗಣಧೀಶ್ವರನ । ಅಕ್ಷತಕಾಮುನ್ನ ಬಲಗೊಂಬೆ ॥ 8 ॥

ಆರತಿಗೆ ಆಮುನ್ನ ಈಗ್ಯಾರ ಬಲಗೊಂಬಿ । ದೇವರ ಹಿರಿಯ ಕುವರನ ।
ಕುವರ ಗಣಧೀಶ್ವರನ । ಅರತಿಗಾಮುನ್ನ ಬಲಗೊಂಬೆ ॥ 9 ॥

ಬೆಳ್ಳಿ ಮೂಡುವ ಮುನ್ನ । ಒಳ್ಳೆಂಬುದ ನಾ ಕಂಡಿ । ನೆಲ್ಲಕ್ಕಿ ಹೊನ್ನ ಹರಿವಾಣ ।
ಹರಿವಾಣದೊಳಗಿಟ್ಟು ಒಳ್ಳೆಂಬಕ್ಷತೆಯ ಕಲಸಿರೆ ॥ 10 ॥

ನೇಸರ ಮೂಡುವ ಮುನ್ನ । ಲೇಸೆಂಬದಾ ಕಂಡಿ । ಕೇಸಕ್ಕಿ ಹೊನ್ನ ಹರಿವಾಣ ।
ಹರಿವಾಣದೊಳಗಿಟ್ಟು । ಲೇಸೆಂಬಕ್ಷತೆಯ ಕಲಸಿರೆ ॥ 11 ॥

ಮುತ್ತಿನ ಹರಿವಾಣದಲಿ । ರತ್ನದಕ್ಷತೆ ಕಲಸಿ । ಸುತ್ತಿನ ಕೇರಿಯನೆ ಕರಿಸುವ ।
ಕರಿಸೂವಂತಹ ವಾರ್ತೆ । ಮತ್ತಾಗಲಿ ನಮ್ಮ ಮನೆಯಲ್ಲಿ ॥ 12 ॥

ಚಿನ್ನದ ಹರಿವಾಣದಲಿ । ರನ್ನದಕ್ಷತೆ ಕಲಸಿ । ಕೂಡಿನ ಕೇರಿಯನೆ ಕರಿಸುವ ।
ಕರಿಸೂವಂತಹ ವಾರ್ತೆ । ಈಗಾಗಲಿ ನಮ್ಮ ಮನೆಯಲ್ಲಿ ॥ 13 ॥

## 11.4 ಹಸೆಗೆ ಕರೆದಿದ್ದು

ಹಸೆಗೆ ಬಾರೊ । ವಾಸುಕಿ ಶಯನ ॥ ಪ ॥ ಸಾಸಿರ ನಾಮದ ಹೆಸರ ಪೊತ್ತವನೆ ॥ ಅ.ಪ ॥

ಬಿಂಕದಿ ರತ್ನ ಪೀಠ । ಅಲಂಕರಿಸಿರುವರು । ಕುಂಕುಮ ಹಚ್ಚುವಲೆ ಶೀಲನೆ ಬಾರೊ ॥ 1 ॥

ಗೋಕುಲದೊಳಗೆ ಹುಟ್ಟಿ । ಗೋವುಗಳನೆ ಕಾಯ್ದ್ದ ।
ಗೋಪಿಯ ಮಡಿಲೊಳಗಾಡುವ ಕೃಷ್ಣ ॥ 2 ॥

ಹೆಜ್ಜೆಯ ಮೇಲೊಂದು । ಹೆಜ್ಜೆಯನಿಕ್ಕುತ । ಮುದ್ದು ಗೋಪಾಲಕೃಷ್ಣ ।
ಎದ್ದು ನೀ ಬಾರೊ ॥ 3 ॥

## 11.5 ಹಸೆಗೆ ಕರೆದಿದ್ದು (ಮದುಮಗಳು(

ಸಖಿ ನೀ ಬಾರೆ । ಹರುಷವ ತೋರೆ ॥ ಪದುಮದ ಹಸೆಗೆ ದಯ ಮಾಡೆ ॥ ಪ ॥

ಕಡಲ ಶಯನನ । ಕಡುಮೋಹದ ರಾಣಿ । ಬಡ ನಡು ಬಳುಕುತ ಬಾರೆ ॥ 1 ॥

ಮಿತ್ರೆಯರೆಲ್ಲ ಸೇರಿ । ಮುತ್ತಿನ ಹಸೆಯ ಬರೆದು । ಅರ್ತಿಲಿ ಕರೆವರು ಬಾರೆ ॥ 2 ॥

ಧರೆಯೊಳಧಿಕವಾದ । ಬನವಾಸಿ ಪುರದೊಳು । ಗುರು ಮಧುಕೇಶನ ।
ಅರಸಿ ನೀ ಬಾರೆ ॥ 3 ॥

## 11.6 ಎಣ್ಣೆ ಹನಿಸಿದ್ದು

ಸತ್ಯ ಶ್ರೀ ಗಣಪತಿಯ ಭಕ್ತಿಯಲಿ ಬಲಗೊಂಡು । ಎತ್ತಿ ಕರಗಳನೆ ಮುಗಿವೆನು ।
ಮುಗಿವೆನು ಶ್ರೀಹರಿಯ ಒತ್ತೆಣ್ಣೆ ಪದ ನಾ ಪೊಗಳುವೆ ॥ ಪ ॥

ಚಪ್ಪರದೊಳಗೆಲ್ಲಾ ಬಟ್ಟುಮುತ್ತಿನ ಹಸೆ ಬರೆದು । ಪಟ್ಟೆವಾಳೆಯನೆ ಹಸೆ ಹಾಸಿ ।
ಹಸೆ ಹಾಸಿ ಸಖಿಯರು ಉಲ್ಲಾಸದೊಳೊತ್ತಿದರೆ ಉಗುರೆಣ್ಣೆ ॥ 1 ॥

ಚಾವಡಿಯೊಳಗೆಲ್ಲಾ ಸಣ್ಣ ಮುತ್ತಿನ ಹಸೆ ಬರೆದು । ಬಣ್ಣವಾಳೆಯನೆ ಹಸೆ ಹಾಸಿ ।
ಹಸೆ ಹಾಸಿ ಸಖಿಯರು ಚಂದದೊಳೊತ್ತಿದರೆ ಉಗುರೆಣ್ಣೆ ॥ 2 ॥

ಒತ್ತೆಣ್ಣೆಯ ಒತ್ತುವೆ ಅತ್ತಿಗೆ ರುಗುಪಿಣಿ ಬಾರೆ । ಮತ್ತೆ ಅಣ್ಣಯ್ಯನ ಕೆಲದಲ್ಲಿ ।
ಕೆಲದಲ್ಲಿ ಎನುತಾಲೆ ಚಕ್ಕಂದವನಾಡಿ ನುಡಿದಾಳೆ ॥ 3 ॥

ಮಲ್ಲಿಗೆಯ ತೈಲವ ನಲ್ಲೆಯರೆ ಹದಮಾಡಿ । ಚೆಲ್ವ ಶ್ರೀಹರಿಯ ಮಹಿಮೆಯ ।
ಮಹಿಮೆಯ ಪೊಗಳುತ್ತ ಉಲ್ಲಾಸದೊಳೊತ್ತಿದರೆ ಉಗುರೆಣ್ಣೆ ॥ 4 ॥

ಸಂಪಿಗೆಯ ತೈಲವ ಕೆಂಚೆಯರೆ ಹದಮಾಡಿ । ಪಂಕಜನಾಭನಿಗೆ ಶರಣೆಂದು ।
ಶರಣೆಂದು ಪಾಡುತ್ತ ಬಿಂಕದಲೊತ್ತಿದರೆ ಉಗುರೆಣ್ಣೆ ॥ 5 ॥

## 11.7 ಆರತಿ

ಮಾಡಿರೆ ಮಂಗಲವ । ಸಖಿಯರೆ । ಪಾಡಿರೆ ಸಂಗೀತವ ॥ ಪ ॥
ಮಾರನ ತಾತಗೆ ವಾರಿಜಾಂಬಿಕೆಯರು ॥ ಅ.ಪ ॥

ಉಕ್ಷಿಲಿ ಜಗವ । ರಕ್ಷಿಸಿ ಮೆರೆವ । ಅಕ್ಷಯಾತ್ಮಕ ಮಹಲಕ್ಷ್ಮಿಯ ರಮಣಗೆ ॥ 1 ॥

ಮಂದಾರವೆತ್ತಿದ । ಒಂದೇ ಬೆರಳಲಿ । ಸಿಂಧು ಶಯನ ಮುದ್ದು ಇಂದಿರೆರಮಣಗೆ ॥ 2 ॥

ಸಂಗೀತಗಾನಲೋಲ । ಶೃಂಗಾರಶೀಲ । ಗಂಗಾಜನಕ ಭುಜಂಗ ಶಯನನಿಗೆ ॥ 3 ॥

## 11.8 ಆರತಿ

ಮಂಗಲ ಪಾಡಿರೆ ರಂಗಗೀಗ ॥ ಪ ॥ ಅಂಗನೆಯರು ಶೃಂಗಾರದಿ ಬೇಗ ॥ ಅ.ಪ ॥

ಗೋಪಿಯ ಕಂದ । ಗೋಕುಲಾನಂದ । ತಾ ಕೊಳಲೂದುತ ನಲಿವ ಶ್ರೀಹರಿಗೆ ॥ 1 ॥

ವಸುದೇವ ಕಂದ । ವಸುಧೆಗಾನಂದ । ಶಶಿಮುಖಿಯರ ಮನೆಯ ಮೊಸರ ಕದ್ದವಗೆ ॥ 2 ॥

ಉದುಕ ಶಯನ । ಪದುಮ ನಯನ । ಮುದದಿಂದ ಮಾವನ ಕೆಡಹಿ ಬಂದವಗೆ ॥ 3 ॥

## 11.9 ದಂಪತಿಗೆ ಆರತಿ

ಎಸೆವ ಮಾಣಿಕ ರತ್ನ । ಹಸೆಯ ಪೀಠದ ಮೇಲೆ । ಶಶಿರವಿ ಪ್ರಭೆಯಂದದಿ ।
ಕೇಶವ ಸಿರಿ ಎಸೆದು ಕುಳ್ಳಿರಲಂದದಿ । ಸತಿಯವರು ಮುದದಿ ।
ಕುಸುರಿ ಕಂಕಣ ಕರದಿ ಹೊಳೆಯುತ । ನೊಸಲಿಗಕ್ಷತೆಯಿಟ್ಟು ಹರುಷದಿ ।
ಸುರಸಂಹಾರಕಗು ಲಕ್ಷುಮಿಗು । ಕುಸುಮಗಂಧಿನಿಯವರು ಪೊಗಳುತ ।
ಕುಶಲದಾರತಿಯ ಬೆಳಗಿದ ॥ 1 ॥

ಬಿಂಬಧರೆಯರು ಬಾಲೆಯರು ಬೆಡಗಿನಲಿ । ತುಂಬು ಯೌವನದವರು ।
ಕೇಶವ ಸಿರಿ ಕಂಬು ಕಂದರ ಕಾಂತೆಯರು । ಕನಕಾಂಗಿಯವರು ।
ಮಂದಹಾಸದಿ ಮೆಲ್ಲಡಿಯವರು । ಇಂದ್ರ ಮಾಣಿಕದ ಹರಿವಾಣದಿ ।
ಚಂದ್ರಕಾಂತದ ಸೊಡರ ಬೆಳಕೆ । ಇಂದಿರೇಶ ಶ್ರೀ ಹರಿಗೂ ಲಕ್ಷುಮಿಗೂ ।
ಕುಂದಣದಾರತಿಯ ಬೆಳಗಿದ ॥ 2 ॥

ಶ್ವೇತಾಶ್ವರೂಢಗೆ । ಸುಜನರೋದ್ಧಾರಗೆ । ನಿತ್ಯ ನಿರ್ಮಲಾಕಾರಗೆ ।
ಸದಾನಂದ ಭಕ್ತರ ಪಾಲಿಪಗೆ । ಲಕ್ಷ್ಮೀವಲ್ಲಭಗೆ । ಕರ್ತೃಕೇಶವ ಲಕ್ಷ್ಮೀಯರಸಗೆ ।
ಮುತ್ತು ಮಾಣಿಕದ ಹರಿವಾಣದಿ । ಚಿತ್ತ ಶುದ್ಧಿಯೊಳೆಲ್ಲ ಸತಿಯರು ।
ಎತ್ತಿ ಕರದಲಿ ತಳೆದು ಶೇಷೆಯ । ಅಕ್ಷಯದಾರತಿಯ ಬೆಳಗಿದ ॥ 3 ॥

## 11.10 ಮಗನನ್ನು ಹರಸಿದ್ದು

ಬಾಲ ನೀ ಗುಣಶೀಲನಾಗಿಳೆಯೊಳಗೆ ಬಾಳೆಲೊ ಅನುದಿನ ॥
ಇಳೆಯೊಳಗೆ ಬಾಳೆಲೊ ಅನುದಿನ ॥ ಪ ॥
ಕಾಲ ಕಾಲಕೆ ಬಿಡದೆ ಹರುಷದಿ । ಭಜಿಸುತಿರು ಶ್ರೀ ಲೋಲನ ॥ ಅ.ಪ ॥

ಪಂಥ ಪಗಡೆ ಜೂಜಿನಾಟಕೆ । ಚಿತ್ತವನು ನೀ ಕೊಡದಿರು ।
ಸತ್ಯವಂತರ ಸಂಗದಿಂದಲಿ । ನಿತ್ಯ ಸುಖವನು ಭೋಗಿಸು ॥ 1 ॥

ಕಾಮ ಕ್ರೋಧ ಲೋಭ ಮೋಹ ಎಂಬ । ರಿಪುಗಳ ಗೆಲಿದ್ವರ ।
ಪ್ರೇಮದಿಂದಲಿ ಪೊರೆವ ಸತತ । ಶ್ಯಾಮಸುಂದರ ಸರ್ವದ ॥ 2 ॥

ಶುಧ್ಧ ಭಾವದಿಂದದ್ವೈತ ಮತ । ಸಿದ್ಧಾಂತ ಪದ್ಧತಿಯಲ್ಲಿರು ।
ಬುದ್ಧಿ ಮಾತುಗಳರಿತು ಜಗದೊಳು । ವಿದ್ಯಾವಂತನಾಗಿರು ॥ 3 ॥

## 11.11 ದಂಪತಿಗಳನ್ನು ಹರಸಿದ್ದು

ಅತಿಹಿತದಿಂದಲಿ । ಅತಿಹಿತದಿಂದಲಿ । ಸತಿ ಪತಿ ಬಾಳಿರಿ । ಸತತ ಸುಖವ ಪೊಂದಿ ॥ ಪ
॥ ಕ್ಷಿತಿಯೊಳುತ್ತುಮರೆನಿಸಿ । ಸತತವು ಜನಹಿತವನು ಬಯಸಿ ॥ ಅ.ಪ ॥

ನಿತ್ಯವು ಗೃಹದಾ ಕೃತ್ಯವ ನಡೆಸಿ । ಸತ್ಯ ಸದಾಚಾರದಿ ಮನವಿರಿಸಿ ।
ನಿತ್ಯವೂ ಭೋಜನ ಅತಿಥಿಗೆ ಉಣಿಸಿ । ಮಿಥ್ಯಾ ಮೋಹ ಢಾಂಬಿಕವನು ತ್ಯಜಿಸಿ ॥ 1 ॥

ಕಾಮ ಕ್ರೋಧ ಮದ ಮತ್ಸರ ತ್ಯಜಿಸಿ । ಕಾಮನಯ್ಯನ ಕಥೆ ನೇಮದಿ ಜಪಿಸಿ ।
ಪ್ರೇಮದಿ ಗುರು ಹಿರಿಯರಿಗೆ ನಮಸ್ಕರಿಸಿ । ಸೋಮಮೌಳಿಯ ದಯದಿ ॥ 2 ॥

ಅನ್ಯರ ಗುಣದೋಷಗಳ ಎಣಿಸದೆ । ಅನ್ಯಾಯದಿ ಪರ ದ್ರವ್ಯಗಳಿಸದೆ ।
ಅನ್ನ ದಾನವ ಗೈಯುತ ಗೃಹದೊಳಗೆ । ಅನ್ನಪೂರ್ಣೆಯ ದಯದಿ ॥ 3 ॥

## 11.12 ಕೇರಿ ಕರೆದಿದ್ದು

ಕರೆದಳೆ ಕೌಸಲೆ ಕೇರಿಯನು । ತನ್ನ ತರಳನ ಮಂಗಳ ಕಾರ್ಯಕೆಂದು ॥ ಪ ॥

ಸೂರ್ಯೋದಯದಿ ಎದ್ದು ಸಾರಣೆಯನೆ ಮಾಡಿ । ಮಾರವೈರಿಯ ಸುತನನು ನೆನೆದು
।
ಭೂರಿ ಸಂಭ್ರಮದೊಳು ನಾರಿಯರೊಡಗೂಡಿ । ಶ್ರೀ ರಮಣನ ಚರಣಕೆ ಎರಗಿ ॥ 1 ॥

ಪಟ್ಟೆ ಸೀರೆಯನು ಉಟ್ಟು ತನ್ನೆಯ । ಒಡ ಹುಟ್ಟಿದವಳ ಸಂಗಡ ಕರೆದು ।
ಸೃಷ್ಟಿಕರ್ತನ ತಾಯಿ ತಾ ತನ್ನ ಭಾಗ್ಯದಿ । ಅರ್ತಿಯಿಂದಲೆ ಅತಿ ಹರುಷದಲಿ ॥ 2 ॥

ಮನೆಯೊಳಗಿರುವಂಥ ಹಿರಿಯರೊಳಗೆಲ್ಲ । ಅನುಮತಿಯನು ಪಡೆಯುತ ಮುದದಿ ।
ತನಯನಿಗಾರತಿ ಅಕ್ಷತೆಗಳ ಮಾಡಿ । ವಿನಯದಿಂದಲಿ ಹೊರಟಳೆ ಬೇಗ ॥ 3 ॥

ಕರದೊಳು ಚಿನ್ನದ ಬಟ್ಟಲ ಪಿಡಿಯುತ । ಸರಸಿಜನೇತ್ರೆಯು ಹರುಷದಲಿ ।
ಕಿರಿಯವಳಾದ ಕೈಕಯಿಯನು ಒಡಗೊಂಡು । ಅರಿಸಿನ ಕುಂಕುಮ ಹಚ್ಚುತಲಿ ॥ 4 ॥

ಅಕ್ಕ ಪಕ್ಕದವರೊಳಿಂತು  ಪೇಳ್ದಳು । ನಿಮ್ಮ ಚಿಕ್ಕ ಮಕ್ಕಳನು ಕರೆದು ತನ್ನಿ ।
ಮಕ್ಕಳೆ ನೀವ್ನಿಮ್ಮ ಸಂಗಡಿಗರ ಕೂಡಿ । ಸಡಗರದಲಿ ನಮ್ಮ ಮನೆಗೆ ಬನ್ನಿ ॥ 5 ॥

## 11.13 ಅಗ್ನಿ ತಂದಿದ್ದು

ಹವನಕೀಗ ನವೀನ ಜ್ವಲನ । ಜವದಿ ತಾರೆ ಭಾವಕಿ ॥ ಪ ॥
ಭುವನ ವಂದಿತೆ ಸಹಜೆ ರಮಣಿ ಸುವಿಮಲಾಕ್ಷಿ ಶಾಂತಳೆ ॥ ಅ.ಪ ॥

ನಡುವೆ ಬಳುಕು ತಡಿಯನಿಡುವ । ಸಡಿಲ ಮುಡಿ ಶೃಂಗಾರಳೆ ।
ಮಡದಿ ಮಣಿಯೆ । ಬೆಡಗಿನಿಂದ ಒಡನೆ ಪುಂಸಯ್ಯಾನಿಯೆ ॥ 1 ॥

ಶೃಂಗಮುನಿಯ ಅಂಗನೆಯಳೆ । ಮಂಗಳಾಂಗಿ ಬೇಗದಿ ।
ಶೃಂಗಾರವಾದ ಗಂಗಾಳದಲಿ । ಮಂಗಲದ ಈ ಕಾರ್ಯಕೆ ॥ 2 ॥

ಮಾಸದಿರುವ ವೈಶ್ವಾನರಳೆ । ದೋಷರಹಿತಳೆ ಬೇಗದಿ ।
ಬಾ ಸುರಾಂಗಿ ನೈಸರ್ಗದೊಳೆ । ಆತ್ಮರಾಮ ಸುಪ್ರೀತೆಯೆ ॥ 3 ॥

## 11.14 ಯಜ್ಞೇಶ್ವರನ ಹುಟ್ಟು

ಗುರುಹಿರಿಯರ ಪಾದ ಪದ್ಮಕಭಿವಂದಿಸಿ । ಸ್ಮರಹರ ಪಿತಗೆ ನಮೋ ಎಂದು ।
ನಮೋ ಎಂದ್ ಯಜ್ಞೇಶ್ವರರ । ಚರಿತೆಯನೆ ಪಾಡಿ ಪೊಗಳೂವಿ ॥ ಪ ॥

ಸೃಷ್ಟಿ ನಿರ್ಮಿಸಿ ಬ್ರಹ್ಮ ಚಿತ್ತದೊಳಾಲೋಚಿಸಿ । ಸಪ್ತ ಋಷಿಗಳನೆ ಬೆಸಗೊಂಡು ।
ಬೆಸಗೊಂಡು ಯಜ್ಞೇಶ್ವರರ ಹುಟ್ಟಿಸಬೇಕೆಂದೆ ನುಡಿದಾನೆ ॥ 1 ॥

ದೇವಾದಿಸುರರು ತಮ್ಮಾಹಾರಕ್ಕೋಸ್ಕರ । ಪಾವಕನ ನಮಗೆ ದಯಮಾಡಿ ।
ದಯಮಾಡಿ ಕೊಡಿರೆಂದು । ದೇವಾದಿ ಸುರರು ನುಡಿದಾರೆ ॥ 2 ॥

ಗಂಗೆ ಪಾರ್ವತಿ ಸಹ ನಂದಿ ವಾಹನವೇರಿ । ಬಂದಾರೆ ಸುರರ ಬಳಿಯಲ್ಲಿ ।
ಬಳಿಯಲ್ಲಿ ಈಶ್ವರರು । ಇಂದ್ರ ಮಾಡುಗ್ರ ತಪವನ್ನು ॥ 3 ॥

ನಮ್ಮ ಲೋಕದ ಜನರು ಹಣ್ಣು ಹಂಪಲ ಸವಿದು । ಪನ್ನೀರಾಹಾರ ದೊಳಗಿರ್ಪ ।
ಒಳಗಿರ್ಪದೆಂಬುವದ । ಪನ್ನಗಭೂಷಣನು ತಿಳಿದಾನೆ ॥ 4 ॥

ಉರಗಭೂಷಣ ತಾನು ಅರಿಯದೆ ಎಂತೆಂಬ । ಧರೆಯ ಮಾನವರ ಅತಿ ಪಾಪ ।
ಅತಿಪಾಪದ ಹೊರೆಗಳ । ಹೊರಲಾರೆ ಎಂದೇ ನುಡಿದಾನೆ ॥ 5 ॥

ಕಡಲೇಳು ಸಾಗರದ ನಡು । ಮಧ್ಯದೊಳಗಿರುವ ಪೊಡವಿಪಾಲನೆಂಬ ಪುರುಷನ ।
ಪುರುಷನ ಮೆಚ್ಚಿಸುವುದಕೆ । ಕಡು ಉಗ್ರ ತಪವಾಚರಿಸಿದ ॥ 6 ॥

ನೀನಲ್ಲದೆ ಜಗವನು ಸಲಹುವರ್ಯಾರೆಂದು । ತಂದೆ ತಾಯಿಗಳು ಜಗಕೆಲ್ಲ ।
ಜಗವ ಮೂರ್ಲೋಕವನು । ರಕ್ಷಿಸಬೇಕೆಂದೇ ನುಡಿದಾರೆ ॥ 7 ॥

ಕರೆತಂದು ಕಮಲ ಪೀಠದ ಮೇಲೆ ಕುಳ್ಳಿರಿಸಿ । ಒಂದಾಗಿ ಸುರರು ನಮಿಸುತ್ತ ।
ನಮಿಸುತ್ತ ಪೊಡವಿಪಾಲಗೆ । ಪಟ್ಟ ಕಟ್ಟಿದರೆ ಸುರರೆಲ್ಲ ॥ 8 ॥

ಸುರರಾಡಿದ ಮಾತಿಗೆ ಹರ ನಸುನಗುತಲಿ । ಶಿರನಗಲಿ ಬಿಟ್ಟ ಅನಲನ ।
ಅನಲ ಮೂರ್ಲೋಕವನು । ಸುಡುವಂದದಲಿಳಿದ ಧರಣಿಗೆ। । 9 ॥

ಗುಡುಗುಡು ಗುಟ್ಟುತ್ತ ಗಗನ ಅಲ್ಲಾಡುತ್ತ । ಶಿರನಗಲಿ ಬಿಟ್ಟ ಅನಲನ ।
ಅನಲ ಮೂರ್ಲೋಕವನು । ಸುಡುವಂದದಲಿಳಿದ ಧರಣಿಗೆ ॥ 10 ॥

ಗಗನದ ತಾರೆಗಳು । ಉದುರುದುರುವಂದದಲಿ ಬಿಡಿ ಮುತ್ತು ಸುರಿದ ತೆರನಂತೆ ।
ತೆರನಂತೆ ಪೊಡವಿಪಾಲನು । ಕಡುಬೇಗದಲಿಳಿದ ಧರಣಿಗೆ ॥ 11 ॥

ಕರೆತಂದು ಕಮಲ ಪೀಠದ ಮೇಲೆ ಕುಳ್ಳಿರಿಸಿ । ಒಂದಾಗಿ ಸುರರು ನಮಿಸುತ್ತ ।
ನಮಿಸುತ್ತ ಪೊಡವಿಪಾಲಗೆ । ಕರ್ಪೂರದಾರತಿಯ ಬೆಳಗಿದ ॥ 12 ॥

ಕೊಡಕೊಡದಲಿ ಘೃತ ತಿಲದುಂಡೆ ರಾಶಿಗಳು । ಬರಹದ ಶಾಲು ರಚನೆಯ ।
ರಚನೆ ಪೀತಾಂಬರದ । ಪಾವಕಗಾಹುತಿಯ ಎರೆದಾರೆ ॥ 13 ॥

ದರ್ಭೆ ಸಮಿಧವು । ಯಜ್ಞೋಪವೀತಗಳು । ಧನ ಧಾನ್ಯ ಸಹಿತ ನವವಿಧ ।
ನವವಿಧ ಮಂತ್ರಗಳಿಂದ । ಯಜ್ಞೇಶ್ವರಗಾಹುತಿಯ ಎರೆದಾರೆ ॥ 14 ॥

ಹಂಡೆ ಕರೆದ ಹಾಲು । ಹಲವು ಪರಿ ಭಕ್ಷಗಳು । ಧನ ಧಾನ್ಯ ಸಹಿತ ನವವಿಧ ।
ನವವಿಧ ಮಂತ್ರಗಳಿಂದ । ಪಾವಕಗಾಹುತಿಯ ಎರೆದಾರೆ ॥ 15 ॥

ಇಂತು ಪೊಡವಿಪಾಲನ ಅಂತರಂಗದ ಕಥೆಯ । ಸಂತೋಷದಿಂದ ಒರಿವೆನು ।
ಒರಿವೆನು ತಪ್ಪಿದ್ದರೆ ವೆಂಕಟರಮಣ ಕರುಣಿಸು ॥ 16 ॥

ಜಯ ಜಯ ಪೊಡವಿಪಾಲನಿಗೆ । ಜಯ ಕಾಲನ ಸನ್ನಿಧಿಗೆ । ಜಯಜಯ ಪಾವಕಗೆ
ಎನುತಾಲೆ । ಎನುತಾಲೆ ಭಕ್ತರು ಜಯವೆಂದಾರತಿಯ ಬೆಳಗಿದ ॥ 17 ॥

ಮಂಗಳ ಪೊಡವಿಪಾಲನಿಗೆ ।  ಮಂಗಳ ಕಾಲನ ಸನ್ನಿಧಿಗೆ । ಮಂಗಳ ಪಾವಕಗೆ
ಎನುತಾಲೆ । ಎನುತಾಲೆ ಬ್ರಾಹ್ಮಣರು । ಜಯಮಂಗಳಾರತಿಯ ಬೆಳಗಿದ ॥ 18 ॥

## 11.15 ನಾಂದಿ ಮಾಡಿದ್ದು

ನಾಂದಿ ಪುಣ್ಯಾಹವನು । ಮಾಡಿಸಿದನು । ಸೌಂದರ್ಯದಿ ಗಾರ್ಘ್ಯನು ॥ ಪ ॥
ಮಿಂದು ಮಡಿಯನುಟ್ಟು ಬಂದ ಯಜಮಾನಗೆ ।
ಚಂದದಿ ಗೈದು ಮಾರ್ಗಂಗವಾಗಿರುವಂಥ ॥ ಅ.ಪ ॥

ಮಂಡಲ ಹಾಕುತಾಗ । ಸಡಗರದೊಳು ತಂಡುಲವಿರಿಸಿ ಬೇಗ ॥
ಸೊಂಡಿಲಾನನನನು ಕಲಶದಿ ಪೂಜಿಸುತಾಗ ।
ಅಂಡಜ ವಾಹನಗೆರಗಿ ಭಕ್ತಿಯೊಳೀಗ ॥ 1 ॥

ಜ್ಯೋತಿಯ ಪಲ್ಲವವ । ಅಪರಂಜಿಯ ಪಾತ್ರೆಯೊಳಿರಿಸಿ ಬೇಗ ॥
ಸಾತಿಶಯದಿ ತ್ರೈವೇಣಿಯ ಜಲ ತುಂಬಿ । ನೂತನದಲಿ ನಾರಿಕೇಳವ ಮೇಲಿಟ್ಟು ॥ 2 ॥

ಕಲಶಯುಗ್ಮವನು ಆಗ । ಮಂಡಲದೊಳಿಟ್ಟು ಗಳಿಲನೆ ಪಂಚರತ್ನವ ॥
ನಲವಿಂದಿಕ್ಕುತ ಮಕರ ಧ್ವಜನ ಆವಾಹಿಸಿ । ಆಲಸದೆ ಪೂಜಿಸಿ ವೀಳ್ಯಾರತಿ ಗೈದು ॥ 3 ॥

ಒಂದು ಕಲಶದ ಜಲವ । ಮತ್ತೊಂದಕಾನಂದದಿ ಮಿಶ್ರಿತವ ॥
ಚಂದದಿ ಗೈದು ಪ್ರಧಾನ ಕಲಶವನೆತ್ತಿ । ಗೋವಿಂದನ ಸ್ಮರಿಸಿ ಪ್ರದಕ್ಷಿಣೆ ಮೂರಿಕ್ಕಿ ॥ 4 ॥

ಚಂದದಿ ಜಲವನಿಟ್ಟ । ಪಾತ್ರೆಯೊಳಿಕ್ಕಿ ಮಂದಹಾಸದೊಳು ವಿಪ್ರ ॥
ಕೊಂಡು ದೂರ್ವಾಂಕುರ ನಂದದಿ ಪ್ರೋಕ್ಷಿಪ ।
ನಂದದಾಯಕ ಆತ್ಮಾರಾಮನ ಮಂತ್ರದೊಳ್ ॥ 5 ॥

## 11.16 ಮಂಗಳ ಸ್ನಾನ

ಇಂದು ಬಂದಕ್ಕವ್ವಂಗೆ ಚೆಂಬಿನಲ್ಲುದಕವ ನೀಡಿ । ದಂಡೆ ತಂಡುಲವ ಮುಡಕೊಡಿ ।
ಮುಡಕೊಡಿ ಅಕ್ಕವ್ವಂಗೆ । ತಂದು ಕೊಡಿ ಹೊನ್ನ ಕಲಶವ ॥ 1 ॥

ಈಗ ಬಂದ ತಂಗವ್ವಂಗೆ ಹೂಜಿಯಲ್ಲುದಕವ ಕೊಡಿ । ಹೂವು ದಂಡೆಗಳ ಮುಡಕೊಡಿ
। ಮುಡಕೊಡಿ ತಂಗವ್ವಂಗೆ । ತಂದು ಕೊಡಿ ಹೊನ್ನ ಕಲಶವ ॥ 2 ॥

ಅಕ್ಕ ಕಲಶವ ಕೊಂಡು ಹೊಸ್ತಿಲಿನಿಂದಿಳಿವಾಗ । ಹೊಸ್ತಿಲಿನ ಗೌಳಿ ನುಡಿದಾಳೆ ।
ನುಡಿದಾಳೆ ತನಗೊಬ್ಬ ಪುತ್ರ ಹುಟ್ಟಿದನೆ ಬಳಗಕ್ಕೆ ॥ 3 ॥

ತಾಯಿ ಕಲಶವ ಕೊಂಡು । ಬಾಗಿಲನೆ ಇಳಿವಾಗ । ಬಾಗಿಲಿನ ಗೌಳಿ ನುಡಿದಾಳೆ ।
ನುಡಿದಾಳೆ ತನಗೊಬ್ಬ ಬಾಲ ಹುಟ್ಟಿದನೆ ಬಳಗಕ್ಕೆ ॥ 4 ॥

ಅಂದದಲಿ ಚಂದದಲಿ । ಮೂರಂದದಲಿ ಒಲೆ ಹೂಡಿ । ಗಂಧದ ಚಕ್ಕೆ ತಳಕ್ಕಿಟ್ಟು ।
ತಳಕ್ಕಿಟ್ಟು ಕಾದ ನೀರು । ನಾರಿ ನಿನ್ನ ಮಗನ ಜಳಕಕ್ಕೆ ॥ 5 ॥

ಆಯದಲಿ ಛಾಯದಲಿ । ಮೂರಾಯದಲಿ ಒಲೆ ಹೂಡಿ । ಆಲದ ಚಕ್ಕೆ ತಳಕ್ಕಿಟ್ಟು ।
ತಳಕ್ಕಿಟ್ಟು ಕಾದ ನೀರು । ಮಿತ್ರೆ ನಿನ್ನ ಮಗನ ಜಳಕಕ್ಕೆ ॥ 6 ॥

ಅತ್ತಿಯ ಮಣೆಗೆ ಹೇಳಿ । ಹತ್ತೆಂಟು ದಿನವಾತು । ಅತ್ತಿ ಮಣೆ ಯಾಕೆ ತರಲಿಲ್ಲೆ ।
ತರಲಿಲ್ಲೆ ನಮ್ಮ ಮನೆಯ । ಮುತ್ತಿನ ಹಸೆ ಮಣೆಯ ತೆಗತನ್ನಿ ॥ 7 ॥

ಆಲದ ಮಣೆಗೆ ಹೇಳಿ ಆರೇಳು ದಿನವಾತು । ಆಲದ ಮಣೆ ಯಾಕೆ ತರಲಿಲ್ಲೆ ।
ತರಲಿಲ್ಲೆ ನಮ್ಮ ಮನೆಯ । ಹೂವಿನ ಹೊಸ ಮಣೆಯ ತೆಗ ತನ್ನಿ ॥ 8 ॥

ಪುತ್ರ ಮಿಂದ ನೀರು ಹೊಸ್ತಿಲಿಗೆ ಹರಿದಾವೆ । ಹೊಸ್ತಲ ದಾಟಿ ಮಿಗಿಲ್ಯಾಟಿ ।
ಮಿಗಿಲ್ಯಾಟಿ ಮುಂದಿನ ಕಿತ್ತಿಳೆ ವನಕೆ ಹರಿದಾವೆ ॥ 9 ॥

ಬಾಲ ಮಿಂದ ನೀರು ಬಾಗಿಲಿಗೆ ಹರಿದಾವೆ । ಬಾಗಿಲ ದಾಟಿ ಮಿಗಿಲ್ದಾಟಿ ।
ಮಿಗಿಲ್ದಾಟಿ ಮುಂದಿನ ಬಾಳೆಯ ವನಕೆ ಹರಿದಾವೆ ॥ 10 ॥

ಪುತ್ರ ಮಿಂದು ಬಂದು । ಹೊಸ್ತಿಲೊಳಗಿರುವನು । ಬಪ್ಪವರ ದೃಷ್ಟಿ ಘನವಲ್ಲ ।
ಘನವಲ್ಲ ತಾಯಮ್ಮ । ಪುತ್ರಯ್ಯನ ಒಳಗೆ ಕರೆತಾರೆ ॥ 11 ॥

ಬಾಲ ಮಿಂದು ಬಂದು ಬಾಗಿಲೊಳಗಿರುವನು । ಬರುವವರ ದೃಷ್ಟಿ ಘನವಲ್ಲ ।
ಘನವಲ್ಲ ತಾಯಮ್ಮ । ಬಾಲಯ್ಯನ ಒಳಗೆ ಕರೆತಾರೆ ॥ 12 ॥

ಗುಡುಗು ಮಳೆ ಎಂದು ಹೆದರದಿರು ಹೆತ್ತಮ್ಮ । ಗುಡುಗಲ್ಲ ಮಳೆಯ ಹನಿಯಲ್ಲ ।
ಹನಿಯಲ್ಲ ನಿನ್ನ ಕುವರ । ಮಿಂದು ಚಂಡಿಕೆಯ ಕುಡುಗಿದ ॥ 13 ॥

ಮಿಂಚು ಮಳೆ ಎಂದು ಅಂಜದಿರು ತಾಯಮ್ಮ । ಮಿಂಚಲ್ಲ ಮಳೆಯ ಹನಿಯಲ್ಲ ।
ಹನಿಯಲ್ಲ ನಿನ್ನ ಕುವರ । ಮಿಂದು ಚಂಡಿಕೆಯ ಕುಡುಗಿದ ॥ 14 ॥

ಎಸರ್ಯೋಳದಂಗಲೆ ಎಸರೇತಕ್ಕೆದ್ದಾವೆ । ಎಸರಿಗೆ ದೊಡ್ಡವರ ಮಗ ಮಿಂದು ।
ಮಗ ಮಿಂದು ಬರುವಾಗ । ಎಸರಿನ ಹೆಗ್ಗಾಳೆ ನುಡಿದಾವೆ ॥ 15 ॥

ನೀರ್ಯೋಳದಂಗವೆ ನೀರ್ಯಾತಕ್ಕೆದ್ದಾವೆ । ಊರಿಗೆ ದೊಡ್ಡವರ ಮಗ ಮಿಂದು ।
ಮಗ ಮಿಂದು ಬರುವಾಗ । ಭೇರಿ ವಾದ್ಯಗಳೆ ಮೊಳಗಿದ ॥ 16 ॥

## 11.17 ಅಲಂಕರಿಸಿದ್ದು

ನಿತ್ಯನಿರ್ಮಲನಿಗೆ ನೀರೆರೆದು ತಾನು ಎತ್ತಿ ತೊಡೆಯೊಳಿಟ್ಟು ಮುದ್ದಾಡಿ ।
ಎತ್ತಿ ತೊಡೆಯೊಳಿಟ್ಟು ಮುದ್ದಾಡಿ ॥ ಮುತ್ತ ಕೊಟ್ಟು ಬಹು ವಿಧದಿಂದ ಮುದ್ದಿಸಿ ।

ಅರ್ತಿಯಿಂದಲೆ ಅಲಂಕರಿಸಿದಳು । ಅರ್ತಿಯಿಂದಲೆ ಅಲಂಕರಿಸಿದಳು॥ 1 ॥

ಕಡು ಮುದ್ದು ಕೃಷ್ಣನ ತೊಡೆಯ ಮೇಲೆತ್ತುತ್ತ । ಜಡೆಯ ಹೆಣೆದು ಹೂವ ಮುಡಿಸಿ ಬೇಗ ॥
ಬಿಡದೆ ಮುತ್ತಿನ ಚಂಡರಳೆಲೆ ಗಂಟನು ಸಡಗರದಲೆ ಅಲಂಕರಿಸಿದಳು ॥ 2 ॥

ಎನ್ನಪ್ಪ ರಂಗ ನೀ ಸುಮ್ಮನಿರು । ದೊಡ್ಡ ಗುಮ್ಮ ಬಂದನು ಅಳಬೇಡೆನುತ ॥
ಮನ್ಮಥ ಪಿತನಿಗೆ ಬೆಣ್ಣೆಯ ತಿನಿಸುತ್ತ । ಸನ್ಮನದಿಂದಲಂಕರಿಸಿದಳು ॥ 3 ॥

ಕಾಲಲಂದಿಗೆ ಗಜ್ಜೆ ತೋಳ ಮಣಿಯ ದಂಡೆ । ಬಾಲನ ಹರಳೋಲೆಗಳು ನಲಿಯೆ ॥
ನೀಲದುಡುಗೆಯುಟ್ಟ ಬಾಲ ನೀ ಬಾರೆಂದು । ಪಾಲುಣಿಸುವ ಪುಣ್ಯ ಪಡೆದಳಮ್ಮ ॥ 4 ॥

ಪೊಡವಿಯ ಈರಡಿ ಮಾಡಿದ ದೇವ । ತುದಿಬೆರಳಲಿ ಕೊಡೆಗಳ ಹಿಡಿದು । ತಾ ॥
ಅಡಿ ಇಡು ಮಗನೆ । ಮೇಲಡಿ ಇಡು ಎನುತಾಲೆ ನಡೆಗಲಿಸುವ ಪುಣ್ಯ ಪಡೆದಳಮ್ಮ। ತಾ ॥ 5 ॥

ಶಂಖ ಚಕ್ರ ಗದ ಪದುಮ ಧಾರಕನ । ಪಂಕಜ ಶತಕೋಟಿ ತೇಜನನ ॥
ಶಂಕೆಯಿಲ್ಲದೆ ಆಭರಣಗಳಿಡುತಲಿ । ಅಲಂಕರಿಸುವ ಪುಣ್ಯ ಪಡೆದಳಮ್ಮ ॥ 6 ॥

ಸಾಗರ ಶಯನನೆ ಭೋಗಿಶಾನನ ಮೇಲೆ । ಯೋಗನಿದ್ರೆಯೊಳಿಪ್ಪ ದೇವ ನಮೋ ॥
ಆಗಮ ನಿಗಮಗಳರಸಿ ಕಾಣದ ವಸ್ತು । ಪಾಡಿ ತೂಗುವ ಪುಣ್ಯ ಪಡೆದಳಮ್ಮ ॥7॥

ಮಾಧವ ಬಾ । ಮಧುಸೂದನ ಬಾ ಬಾ । ಆದಿಮೂರುತಿ ಹರಿ ಬಾ ಎನುತ ॥
ವೇದಮೂರುತಿ ಶ್ರೀ ಪುರಂದರ ವಿಠಲನ । ಆದರಿಸಿಯೆ ಅಲಂಕರಿಸಿದಳು ॥8॥

## 11.18 ಭಾಸಿಗ ಮುಡಿಸಿದ್ದು

ದಶರಥನಂದನ ಸುತ ರಾಮನಿಗೆ । ಹಸಮುತ್ತಿನ ಶೇಷೆಯನಿಡಿಸಿ ।
ಮತಿವಂತನಾಗೆಂದು ಹರಸುತ್ತ ಕೌಸಲೆ । ಸುತನಿಗೆ ಭಾಸಿಗವ ಮುಡಿಸಿದ॥ 1 ॥

ಜಯಜಯ ಜಯವೆನ್ನಿ ಸೀತಾರಾಮಗೆ । ಜಯ ಜಯ ಜಯವೆನ್ನಿ ಸೀತಾ ದೇವಿಗೆ ।
ಜಯ ಜಯ ಜಯವೆಂದು ಹರಸುತ್ತ ಕೌಸಲೆ । ಸುತನಿಗೆ ಭಾಸಿಗವ ಮುಡಿಸಿದ ॥ 2 ॥

ಕಂಡಿರೊ ನೀವೆಲ್ಲ ವಂಡ್ಯ ಭಾಸಿಗವ । ಭಾಸಿಗಕೆಲ್ಲ ಸೂಸುಕ ಮುತ್ತೆ ।
ಸೂಸುಕ ಮುತ್ತಿಗೆ ಗಿಳಿ ಹಿಂಡು ಪೌಂಸೆ । ವಿಸ್ತರವಾಗಿಹ ನಲಿವಂಥ ಭಾಸಿಗವ ।
ಪುತ್ರನ ನೊಸಲೊಳಗೆ ಮುಡಿಸಿದ ॥ 3 ॥

ನೋಡಿರೆ ನೀವೆಲ್ಲ  ಜೋಳ್ಯ ಭಾಸಿಗವ । ಭಾಸಿಗಕೆಲ್ಲಾ ಸೂಸುಕ ಮುತ್ತೆ ।
ಸೂಸುಕ ಮುತ್ತಿಗೆ ಗಿಳಿ ಹಿಂಡು ಪೌಂಸೆ । ವಿಸ್ತರವಾಗಿಹ  ನಲಿವಂಥ ಭಾಸಿಗವ ।
ಸುತನ ನೊಸಲೊಳಗೆ ಮುಡಿಸಿದ ॥ 4 ॥

## 11.19 ಭಾಸಿಗ ಮುಡಿಸಿದ್ದು

ಪುತ್ರ ಗೋಪಾಲನ ಕರೆದು ಕುಳ್ಳಿರಿಸಿ । ಮುತ್ತಿನಕ್ಷತೆಗಳ  ನೊಸಲೊಳಗಿರಿಸಿ ।
ಪುತ್ರ ಗೋಪಲ ನೀ ಸೃಷ್ಟಿಯನಾಳೆಂದು । ಪುತ್ರಗೆ ಭಾಸಿಗವ ಮುಡಿಸಿದ ॥ 1 ॥

ಬಾಲ ಗೋಪಾಲನ ಕರೆದು ಕುಳ್ಳಿರಿಸಿ । ಹೂವಿನಕ್ಷತೆಗಳ  ನೊಸಲೊಳಗಿರಿಸಿ ।
ಬಾಲ ಗೋಪಾಲ ನೀ ಭೂಮಿಯನಾಳೆಂದು । ಬಾಲಗೆ ಭಾಸಿಗವ ಮುಡಿಸಿದ ॥ 2 ॥

## 11.20 ಕಂಚು ಭಿಕ್ಷ

ಮಾಧವ ಗೋಪಾಲ ಬಂದ ನೋಡಿರಮ್ಮ । ಅವನ ಪಾದದ ಗೆಜ್ಜೆ ಧನಿಯು
ಚೆಂದವಮ್ಮ ।
ಮಾಧವ ಗೋಪಾಲಗೆ ಭಿಕ್ಷವ ನೀಡಿರಮ್ಮ ॥ ಪ ॥

ಹಸ್ತದಲ್ಲೆ ರತ್ನದ ಕೊಳಲ ಪಿಡಿದನಮ್ಮ । ಅವನ ಕುತ್ತಿಗೆಯೊಳಗಿನ ಮುತ್ತಿನ ಪದಕ
ಚೆಂದವಮ್ಮ । ಕಸ್ತೂರಿ ತಿಲಕವ ಹಣೆಯೊಳಗಿಟ್ಟನಮ್ಮ । ಕೃಷ್ಣನ ದಿಟ್ಟಿಸಿ
ನೋಡಿದರೆ । ದೃಷ್ಟಿ ತಾಗುವುದಮ್ಮ ॥ 1 ॥

ಕರದೊಳಗೆ ದ್ರವ್ಯದ ಕೊಳಲ ಪಿಡಿದನಮ್ಮ । ಅವನ ಸುಳಿಗುರುಳು ಕೋಮಲಾಂಗ
ಚೆಂದವಮ್ಮ । ಕೊಡವ ಒಡೆದು ಹಾಲು ಮೊಸರ ಸುರಿದನಮ್ಮ । ವಾರಿಜನಾಭ
ಶ್ರೀಕೃಷ್ಣನಮ್ಮ ॥  2 ॥

ವಾರಿಜನಾಭ ಮೇಳಗಳಿಂದ ಬರುವನಮ್ಮ । ಸಖಿಯರ ಸೀರೆಯೆಲ್ಲ ಕದ್ದುಕೊಂಡು
ಓಡಿದನಮ್ಮ । ಓಡಿ ಕಡಹದ ಮರವನೇರಿ ನೋಡಿದನಮ್ಮ । ವಾರಿಜನಾಭ ಶ್ರೀ
ಕೃಷ್ಣನಮ್ಮ ॥ 3 ॥

ಪಂಕಜನಾಭ ಬಿಂಕದಿ ಕೊಳಲ ಪಿಡಿದನಮ್ಮ । ಅವನ ಕೊಂಕಿನ ಕೊಳಲು ಕೋಮಲಾಂಗ ಚೆಂದವಮ್ಮ । ಶಂಕೆಯಿಲ್ಲದೆ ಅಸುರರ ಕುಲವ ಮಡುಹಿದನಮ್ಮ । ಪಂಕಜನಾಭ ಶ್ರೀ ಕೃಷ್ಣನಮ್ಮ ॥ 4 ॥

ಮಂತ್ರ ಜ್ಯೋತಿ ಆಗಿ ಮನೆಗೆ ಬರುವನಮ್ಮ । ಅವಗೆ ಮಂತ್ರ ಯಂತ್ರ ತಂತ್ರಗಳು ಬಾರವಮ್ಮ । ಮಂತ್ರ ಶಕ್ತಿ ರೂಪಿನಲ್ಲಿ ಇರುವನಮ್ಮ । ಪಂಕಜನಾಭ ಶ್ರೀ ಕೃಷ್ಣನಮ್ಮ ॥ 5 ॥

ಭಿಕ್ಷಾಂದೇಹಿ ಎಂದು ಬರುವನಮ್ಮ । ಅವನ ಕೈಯೊಳಕ್ಷಯಪಾತ್ರ ಪಿಡಿದನಮ್ಮ । ಜನನಿಯ ಚರಣಕ್ಕೆರಗಿ ನಿಂತನಮ್ಮ । ತರಳಗಹರಳಿನ ಭಿಕ್ಷೆಯ ನೀಡಿರಮ್ಮ ॥ 6 ॥

## 11.21 ಉಡುಗೊರೆ

ಸಣ್ಣಗಂಚಿನ ಶಾಲು ವಲ್ಲಿಯು । ಚಿನ್ನದುಂಗುರ ಚುಳುಕಿ ಬಳೆಯು ।
ಪೊನ್ನ ಕಂಕಣ ಹಸಿರು ಶಾಲೆಯ । ಚಿಣ್ಣರಿಗೆ ಬಾಲ್ಡುಡುಗೆ ಬಂಗಾರವ ।
ಬ್ರಹ್ಮನೊದಗಿಸಿದನೆ ರಾಜ ಸಭೆಯಲ್ಲಿ ॥ 1 ॥

ಕಾಶಿ ಪಾವಡದಲ್ಲೆ ಬಿಗಿದಿದ್ದ । ಕೆತ್ತಿಸಿದ ನವರತ್ನದ್ವಲ್ಲಿಯು ।
ಅಚ್ಚ ಬಿಳಿದು ಹಸಿರು ಶಾಲೆಯ ಪುತ್ರರಿಗೆ ಬಾಲ್ಡುಡುಗೆ ಬಂಗಾರವ ।
ವಸಿಷ್ಠರೊದಗಿಸಿದರೆ ರಾಜ ಸಭೆಯಲ್ಲಿ ॥ 2 ॥

ಗುಂಡುಗೋಪುದ್ದಂಡಪಾಣಿಗೆ । ಪ್ರಚಂಡ ಭೈರವನಿತ್ತ ಸಭೆಯೊಳು ।
ಅಚ್ಚ ಬಿಳಿದು ಹಸಿರು ಶಾಲೆಯ । ಚಿಣ್ಣರಿಗೆ ಬಾಲ್ಡುಡುಗೆ ಬಂಗಾರವ ।
ಬಂಧುಗಳೊದಗಿಸಿದರೆ ರಾಜ ಸಭೆಯಲ್ಲಿ ॥ 3 ॥

## 11.22 ಮಗನಿಗೆ ಆಶೀರ್ವಾದ

ಸುಖಿಯಾಗಿ ಬಾಳೆಲೊ ನೀ । ಸುತನೇ ಸಂತಸದಿ ॥ ಪ ॥

ಸಕಲ ವಿದ್ಯವನೋದುತೆ ಲಕುಮಿ ಪತಿ ದಯದಿ ।
ಅಖಿಲ ಲೋಕವ ಪಾಲಿಸಿ ಸರ್ವರ ಸಖ ನೀನೆಂದೆನಿಸಿ ॥ 1 ॥

ಭೂಸುರರಾಶೀರ್ವಾದದೊಳು । ತೋಷವಗೊಳ್ಳುತಲಿ । ವಾಸಿಸು
ಗುರುಕುಲದೊಳಭ್ಯಾಸವ ಗೈಯುತಲಿ । ಬೇಸರಿಸದೆ ಸಕಲ ಶಾಸ್ತ್ರಗಳ ತಿಳಿಯುತಲಿ ।
ವಾಸುಕಿ ಭೂಷ ಗಣೇಶನ ದಯದಿ ಸಂಪೂರ್ಣ ಸಿದ್ಧಿಯ ಪೊಂದಿ ॥ 2 ॥

ಕಾಲವನು ತಪ್ಪದೆ ನೀ ಧ್ಯಾನಿಕ ವಿಧಿಯಿಂದ । ಪಾಲಿಸು ವರ್ಣಾಶ್ರಮದ
ಧರ್ಮವನದನೊಂದ । ಲಾಲಿಸು ಗುರು ಹಿರಿಯರ ನುಡಿ ಮೀರದಿರು ಕಂದ ।
ನೀಲ ಮೇಘ ಶ್ಯಾಮ ಒಲುಮೆಯಿಂದಲಿ ನೀ ಬಾಳಯ್ಯಾ ಬಹು ಕಾಲ ॥ 3 ॥

ವೇದದ ತತ್ವವ ಪರರಿಗೆ ಬೋಧಿಸುತಿರು ನೀನು । ಆದಿ ಪುರಾಣದಲಿ ಗಳಿಸುತೆ
ಕೀರ್ತಿಯನು । ಛೇದಿಸು ದುರ್ಗುಣವನ್ನು ಅಹಂಕಾರಗಳನ್ನು ।
ಸಾಧಿಸಿ ನಿಜಗುರು ದಯದಿಂದ ಚಿರಸುಖಿಯಾಗಿರು ಧರೆಯೊಳಿನ್ನು ॥ 4 ॥

## 11.23 ಆಶೀರ್ವಾದ

ಹತ್ತು ಸಾವಿರವಾಗು । ಕಿತ್ತಳೆ ವನವಾಗು । ಬಪ್ಪವರಿಗೆ ತವರ ಮನೆಯಾಗು ।
ಮನೆಯಾಗು ತಮ್ಮಯ್ಯ । ಹೆತ್ತವರ ಹೆಸರು ನಡೆಯಲಿ ॥ 1 ॥

ಆರು ಸಾವಿರವಾಗು । ಬಾಳೆಯ ವನವಾಗು । ಬರುವವರಿಗೆ ತವರ ಮನೆಯಾಗು ।
ಮನೆಯಾಗು ತಮ್ಮಯ್ಯ । ಹಿರಿಯವರ ಹೆಸರು ನಡೆಯಲಿ ॥ 2 ॥

ಅಕ್ಕ ಆರತಿ ಎತ್ತಿ । ಮತ್ತೆ ನಾ ಹರಸಿದ । ಗೊತ್ತಿಯ ರಾಜ್ಯದರಸಾವು ।
ಅರಸಾಗು ಬಡವರ । ರಕ್ಷಿಸುವ ಭಾಗ್ಯ ನಿನಗಾವು ॥ 3 ॥

ತಾಯಿ ಆರತಿ ಎತ್ತಿ ಹೀಗೆ ತಾ ಹರಸಿದ । ಗೋವೆಯ ರಾಜ್ಯದರಸಾವು ।
ಅರಸಾಗು ಬಡವರ । ರಕ್ಷಿಸಿ ನೀನು ಸುಖ ಬಾಳು ॥ 4 ॥

ಸಂಪತ್ತು ಹೆಚ್ಚಲೆಂದು । ಸಂಪಿಗೆಯನಿಡಿಸಿದ । ತಂಪಿಗೆ ಎರೆದ ನೊರೆಹಾಲು ।
ನೊರೆ ಹಾಲೆನ್ನಮ್ಮನ । ಸಂಪತ್ತಿನರಗಿಣಿಯೆ ಸುಖ ಬಾಳು ॥ 5 ॥

ಬಳಗ ಹೆಚ್ಚಲೆಂದು । ಬದನೆಯ ನೆಡಿಸಿದ । ಧೇನುವಿಗೆರೆದ ನೊರೆಹಾಲು ।
ನೊರೆಹಾಲೆನ್ನಮ್ಮನ ಬಳಗದರಗಿಣಿಯೆ ಸುಖಬಾಳು ॥ 6 ॥

ಉಪ್ಪರಿಗೆ ಒಳವಿಗೆ ಕಿತ್ತಳೆ ಸಸಿ ಹುಟ್ಟಿ । ಗುತ್ತಿಗೆ ಬೇರು ಇಳಿದಂತೆ ।
ಇಳಿದಂತೆ ತಮ್ಮಯ್ಯ । ಹಿರಿಯವರ ಹೆಸರು ನಡೆಯಲಿ ॥ 7 ॥

ಮಾಳಿಗೆ ಒಳವಿಗೆ ಬಾಳೆಯ ಸಸಿ ಹುಟ್ಟಿ । ಗೋವಿಗೆ ಬೇರು ಇಳಿದಂತೆ ।
ಇಳಿದಂತೆ ತಮ್ಮಯ್ಯ । ಹೆತ್ತವರ ಹೆಸರು ನಡೆಯಲಿ ॥ 8 ॥

ಅಡ್ಡಮುಡಿ ತಂಗವ್ವ । ಬಗ್ಗಿದಳೆ ಚರಣಕ್ಕೆ । ಚಿತ್ತದ್ವಲ್ಲಭನ ಅಗಲದೆ ।
ಅಗಲದೆ ಇರು ಎಂದು ಹೆತ್ತಮ್ಮ ಸಾವಿರವ ಹರಸಿದ ॥ 9 ॥

ಸಣ್ಣಮುಡಿ ತಂಗವ್ವ । ಬಾಗಿದಳೆ ಚರಣಕ್ಕೆ । ಪ್ರಾಣದ್ವಲ್ಲಭನ ಅಗಲದೆ ।
ಅಗಲದೆ ಇರು ಎಂದು । ತಾಯಮ್ಮ ಸಾವಿರವ ಹರಸಿದ ॥ 10 ॥

ಬೆಟ್ಟದ ಗರಿಕೆಯ ಮೆಟ್ಟುವರೊ ತುಳಿವರೊ । ಮತ್ತೊಂದು ಮಳೆಗೆ ಚಿಗುರುವುದು ।
ಚಿಗುರುವುದೊ ಬೆಟ್ಟದ ಗರಿಕೆಯಂದದಲಿ ಸುಖಬಾಳು ॥ 11 ॥

ಏರಿಯ ಗರಿಕೆಯ ತುಳಿವರು ಮೆಟ್ಟುವರು । ಇನ್ನೊಂದು ಮಳೆಗೆ ಚಿಗುರುವುದು ।
ಚಿಗುರುವುದೊ ಏರಿಯ ಗರಿಕೆಯಂದದಲಿ ಸುಖಬಾಳು ॥ 12 ॥

ಸೂರ್ಯಮರಂಥ ಮಗನೆ । ಸೂರ್ಯಮರಿಗೆ ಶರಣೆನ್ನು ।
ಸೂರ್ಯಮರಿಗೆ ನೀನು ಶರಣೆನ್ನು । ಶರಣೆನ್ನು ಮೇಲಣ ।
ಸೂರ್ಯಮರಿರುವತನಕ ಸುಖಬಾಳು ॥ 13 ॥

ಚಂದ್ರಮನಂಥ ಮಗನೆ । ಚಂದ್ರಮರಿಗೆ ಶರಣೆನ್ನು ।
ಚಂದ್ರಮರಿಗೆ ನೀನು ಶರಣೆನ್ನು । ಶರಣೆನ್ನು ಮೇಲಣ ।
ಚಂದ್ರಮರಿರುವತನಕ ಸುಖಬಾಳು ॥ 14 ॥

## 11.24 ದೃಷ್ಟಿ ತಾಗಿದ್ದು

ರಂಗಗೀಗ ದೃಷ್ಟಿ ತಾಗಿತು । ಮಂಗಳಾಂಗಿ ಗೋಪಿ ಬಾ ಬಾ ॥ ಪ ॥
ಅಂಗಳದೊಳಾಡುತಿರುವ ರಂಗ ಬಹಳ ಬಳಲಿದ॥ ಅ.ಪ ॥

ಅಕ್ಕ ಕೇಳೆ ಚಿಕ್ಕ ಕೃಷ್ಣನು । ಕಕ್ಕಿ ಕಕ್ಕಿ ಬಳಲಿದ ।
ಚಿಕ್ಕ ಮಕ್ಕಳ ಆಟವೆನುತ । ಲೆಕ್ಕಿಸದೆ ಬಿಡುವೆಯಾ ॥ 1 ॥

ಅಮ್ಮ ಕೇಳೆ ಚಿನ್ನ ಕೃಷ್ಣನು । ನಿನ್ನೆಗಿಂತ ಬಳಲಿದ ।
ಸಣ್ಣ ಮಕ್ಕಳ ಆಟವೆನುತ । ಬಣ್ಣಿಸದೆ ಬಿಡುವೆಯಾ ॥ 2 ॥

ದುಂಡು ಹರಡಿ ಇಟ್ಟ ಕರದಿ । ಚೆಂಡನಾಡಿ ಬಂದನೆ ।
ದಿಂಡೆಯರ ದೃಷ್ಟಿ ತಾಗಿ । ರಂಗ ಬಹಳ ಬಳಲಿದ ॥ 3 ॥

ಒಡನೆ ಓಡಿ ಹೋಗಿ ದೊಡ್ಡ । ಮಡುವ ಧುಮುಕಿ ನಿಂದನೆ ।
ಪುರದ ಜನರ ದೃಷ್ಟಿ ತಾಗಿ । ಹರಿಯು ಬಹಳ ಬಳಲಿದ ॥ 4 ॥

ಅಷ್ಟ ದಿಕ್ಕಿನೊಳಿರುವ ಜನರು । ದಿಟ್ಟಿಸಿ ನೋಡುತ್ತಲಿರಲು ।
ದಿಟ್ಟಿಸುವರ ದೃಷ್ಟಿ ತಾಗಿ । ಸೃಷ್ಟಿಪಾಲ ಬಳಲಿದ ॥ 5 ॥

## 11.25 ದೃಷ್ಟಿ ತೆಗೆದಿದ್ದು

ಏನಾಯಿತು ರಂಗಗೆ ನೀವ್ ನೋಡಿರಮ್ಮಾ । ಯಶೋದೆ ।
ನಿಧಾನಿಸಿ ಎನಗೊಮ್ಮೆ ಹೇಳಿರಮ್ಮಾ । ಗೋಪಿ॥ ಪ ॥

ಹುಟ್ಟಿದಾರಭ್ಯ ಕಣ್ಣ ಮುಚ್ಚನಮ್ಮ । ಅವ ಇಷ್ಟಾದರನ್ನವ ಉಣ್ಣನಮ್ಮ ।
ತನ್ನ ತುಟುಕು ಮುಖವ ಮೇಲಕ್ಕೆತ್ತನಮ್ಮಾ । ಎಷ್ಟ ಪೇಳಿದರು ಬಾಯ
ಮುಚ್ಚಲೊಲ್ಲನಮ್ಮಮ್ಮಾ ॥ 1 ॥

ಗಾಯ ಇದ್ದ ಹಾಗಿದ್ದು ಹೆಚ್ಚಿತಮ್ಮ । ಅವನ ನೋವು ನೋಟದಿ ಅಗ್ದಿ ಬತ್ತಿತಮ್ಮಾ
।
ಹೆತ್ತ ತಾಯಿ ನೆನಪಿಲ್ಲದಂತಾಯಿತಮ್ಮಾ ।
ತನ್ನ ಬಾಯೊಳಗೆ ವಿಶ್ವರೂಪ ತೋರಿ ಪೋದನಮ್ಮಮ್ಮಾ ॥ 2 ॥

ಅತ್ಯಂತ ಮಾತನಾಡುವನಮ್ಮ । ಪೋಗಿ ಸತ್ಯ ತೇಜಿಯ ಏರುವನಮ್ಮಾ ।
ನಿತ್ಯ ನಿರ್ದೋಷಿ ಪುರಂದರ ವಿಠಲನಮ್ಮಾ ।
ಭಕ್ತರ ಸಲಹುವ ದೇವ ಈತನಮ್ಮಮ್ಮಾ ॥ 3 ॥

## 11.26 ಗೋಪಿಯ ಭಾಗ್ಯ

ಗೋಪಿಯ ಭಾಗ್ಯವಿದು । ಗೋಪಾಲ ಕೃಷ್ಣನ ಈ ಪರಿ ಸೇವಿಸುವುದು ॥ ಪ ॥

ಹೆತ್ತವಳಿವನ ಎತ್ತಲು ಪಡೆಯದೆ । ಮತ್ತೆ ಸೆರೆಮನೆಯೊಳಗಿರುತಿರಲು ।
ಹೆತ್ತಮ್ಮ ಗೋಪಿಗೆ ಎತ್ತಿ ಮುದ್ದಿಸುವುದು । ಎಷ್ಟು ಜನ್ಮದ ಸುಕೃತವೋ ॥ 1 ॥

ಮಣ್ಣ ನುಂಗಿದನೆಂದು ಅಣ್ಣ ರಾಮನು ಪೇಳೆ ।
ಸುಮ್ಮನೆ ಬಿಗಿದೊಪ್ಪಿ ಒಮ್ಮೆ ಬಾಯ್ತೆರೆಸಲು ।
ತನ್ನಮ್ಮ ಗೋಪಿಗೆ ಬ್ರಹ್ಮಾಂಡವ ತೋರಿದ ಚಿನ್ಮಯನ ಸೇವಿಪುದು ॥ 2 ॥

ಜನನಿ ಜನಕರಿಗಿಲ್ಲ ಮನು ಮುನಿಗಳಿಗಿಲ್ಲ । ವನಜನಾಭನ ಸೇವೆ ಗೈಯುವುದು ।
ಚಿನುಮಯಾತ್ಮಕ ಶ್ರೀ ಹರಿಯ ಮುದ್ದಾಡುತ್ತ ಅನುದಿನ ಸೇವಿಪುದು ॥ 3 ॥

## 11.27 ಕೃಷ್ಣನ ಬಾಲ್ಯಲೀಲೆ

ವಸುದೇವ ದೇವಕಿಯ ಬಸುರೊಳು ಜನಿಸಿದ । ವಸುಧೆ ಪಾಲಕನಾದ ಶ್ರೀ ಹರಿಯ ಚರಿತೆಯ । ವಸುಧೆ ಪಾಲಕ ಶ್ರೀ ಹರಿಯ ಚರಿತ್ರೆಯ । ಕುಶಲದಿಂದಲಿ ಕೇಳಿ ಜನರೆಲ್ಲ । ಹರುಷದಿ॥ 1 ॥

ಗೋಕುಲವನು ಸೇರಿ । ಗೋಪಿಯ ಗೃಹದಿ । ಅನೇಕ ಲೀಲೆಯ ತೋರುತ್ತಿರಲೊಂದು ದಿನವಂದು । ಗೋಪ ಗೋಪಿಯರುಲ್ಲಾಸದೊಳಿರುತಿರೆ ।
ಬೇಕೆಂದೆ ಅಡಗಿದ ಗೃಹದೊಳಗೆ । ಹರಿ ತಾನು ॥ 2 ॥

ಹೊತ್ತು ಬಹಳಾಯಿತು ಎತ್ತ ಪೋದೆಯೊ ಎಂದು । ಅತ್ತಿತ್ತ ಹುಡುಕಿ ನೋಡಿದಳಂದು । ಮನನೊಂದು । ಸುತ್ತಲು ಹುಡುಕುತ್ತ ಮನದೊಳು ಮಿಡುಕುತ್ತ ।
ಹೊಸ್ತಿಲೊಳಗೆ ನಿಂದು ಕರೆದಾಳೆ ಕುವರನ ॥ 3 ॥

ಉಡುಗೆ ಪೀತಾಂಬರ ನಡುವಿನ ನ್ಯಾವಾಳ । ಒಡನೆ ಇಡಿಸುವೆ ಕೌಸ್ತುಭ ಹಾರ ನಿನಗೀಗ ।
ಒಡನೆ ಕೌಸ್ತುಭವನು ಇಡಿಸಿ ಮುದ್ದಿಸುವೆ ।
ಎನ್ನೊಡೆಯನೆ ಬಾರೆಂದು ಕರೆದಾಳೆ ಕುವರನ ॥ 4 ॥

ಆಡ ಪೋಗಿಯೆ ನೀನು ಕಾಡ ಕಿಚ್ಚನೆ ನುಂಗಿ । ಕಾಡಿನೊಳಗೆ ಮಿಂದು ದಣಿದೆಯೊ ಎನುತಾಲೆ । ಕಾಡಿಗಂಜಿದರಿನ್ನು ನೋಡುವರ್ಯಾರಿಲ್ಲೆ ।
ದೇವರ ದೇವ ನೀ ಬಾರೆಂದೆ ಕರೆದಾಳೆ ॥ 5 ॥

ಅಂದುಗೆ ಕಿರುಗಜ್ಜೆ ಗಿಲುಕೆಂಬ ರಭಸದಿ । ಬಂದು ಕಾಳಿಂಗನ ಹೆಡೆಯ ಮೇಲೆ ಹರುಷದಿ ।
ಬಂದು ಕಾಳಿಂಗನ ಹೆಡೆಯ ಮೇಲಾಡ್ವ ।
ಗೋವಿಂದನೆ ಬಾರೆಂದು ಕರೆದಾಳೆ ಕುವರನ ॥ 6 ॥

ಬಿಸಿಲಿನ ತಾಪದಿ ಬಸವಳಿದೆಯೊ ನೀನು । ಬಿಸಿಹೋಳಿಗೆ ತುಪ್ಪ ಬಡಿಸುವೆ ಎನುತಾಲೆ ।
ಬಿಸಿ ಹೋಳಿಗೆ ಮೊಸರನ್ನವ ಬಡಿಸುವೆ । ಹಸುಳನೆ ಬಾರೆಂದು ಕರೆದಾಳೆ ಒಳವಿಗೆ ॥ 7 ॥

ಕುಸುಮಲೋಚನ ತಾನು ನಸುನಗೆಯಿಂದಲಿ ।
ಬಿಸಿಹೋಳಿಗೆ ತುಪ್ಪ ಬಡಿಸೆಂದೆ ಹರುಷದಿ । ಬಿಸಿಯ ಹೋಳಿಗೆ ಮೊಸರನ್ನವ ಬಡಿಸೆಂದು । ಹಸು ಮುದ್ದು ಕೃಷ್ಣ ಬಂದ ಒಳವಿಗೆ ಹರುಷದಿ ॥ 8 ॥

ಬಂದ ಮಗನ ನೋಡಿ ಚಂದದಿ ಪಿಡಿದೆತ್ತಿ । ಮುಂದಲೆಯ ತಿದ್ದಿ ತಿಲಕವ ಇಡಿಸುತ್ತ ।
ತಂದು ಹೋಳಿಗೆ ಮೃಷ್ಟಾನ್ನವ ಬಡಿಸಿಹ ।
ನಂದದೊಳಿರುತಿರ್ದರ್ಭುವಿಯೊಳಗೆ ಚಿರಕಾಲ ॥ 9 ॥

## 11.28 ಕೃಷ್ಣನ ಬಾಲ್ಯಲೀಲೆ

ಬಂದ ಶ್ರೀ ಹರಿಯು । ನಲಿಯುತ । ನಿಂದನಾ ದೊರೆಯು ॥ ಬಂದ ಶ್ರೀ ಹರಿಯು ।
ನಿಂದನಾ ದೊರೆಯು । ಚಂದದಿಂದೆದ್ದು ಯಶೋಧೆಯಿದ್ದೆಡೆಗೆ ॥ ಪ ॥

ಉದಯವಾದುದ ನೋಡಿ । ದಧಿಯ ಮಥಿಸುತಲಿರೆ ।
ಅದ್ಭುತ ಬಾಲಲೀಲೆಗಳನ್ನೆ ತೋರಿ ॥ ದಧಿಯೊಳು ನವನೀತ ತುಳುಕಾಡುವುದ ಕಂಡು ।
ಪದುಮನಾಭನು ಮೆಚ್ಚಿ ಬೆಣ್ಣೆಯ ಬೇಡುತ ॥ 1 ॥

ಮಕ್ಕಳೊಳು ಆಡಿ ಮನೆಮನೆಯೊಳು ಪೋಗಿ । ಸಿಕ್ಕದ ಮೇಲಣ ಕ್ಷೀರ ಚೆಲ್ಲ್ಯಾಡಿ ॥
ಅಕ್ಕರೆಯಲಿ ತಾಯಿ ಮೊಗವ ವೀಕ್ಷಿಸುತಿರೆ ।
ಗಕ್ಕನೆ ಸೆರಗ ಪಿಡಿದು ಬೆಣ್ಣೆ ಕೊಡು ಎಂದು ॥ 2 ॥

ಮುಂಗುರುಳಿಗೆ ಮುತ್ತಿನೆರಳೆಲೆ ಮಾಗಾಯಿ । ಹೊನ್ನ ಪದಕ ಸರ ಹೊಳೆಯುತ್ತಲೆ ॥
ಹರಳಿನುಂಗುರವೆ ಬೆರಳ ಮುದ್ರಿಕೆಯೆ । ಮುರಳಿಯ ಪಿಡಿದು ಸರಿಗಮ ನುಡಿಸುತ ॥ 2 ॥

## 11.29 ದಿಬ್ಬಣ ಇದಿರುಗೊಂಡಿದ್ದು

ಪಟ್ಟೆಯನುಡುಬಾರೆ । ಪಟ್ಟೆಯನೊದಿ ಬಾರೆ । ಬಟ್ಟಲು ಬಿತ್ತಕ್ಕಿ ಪಿಡಿ ಬಾರೆ ।
ಪಿಡಿ ಬಾರೆ ನಮ್ಮನೆಗೆ । ಬಪ್ಪ ದಿಬ್ಬಣವ ಇದಿರ್ಗೊಂಬ ॥ 1 ॥

ಸಾಲಿಯನುಡು ಬಾರೆ । ಸಾಲಿಯನೊದಿ ಬಾರೆ । ಸಾಲು ಬಿತ್ತಕ್ಕಿ ಹಿಡಿ ಬಾರೆ ।
ಹಿಡಿ ಬಾರೆ ನಮ್ಮನೆಗೆ । ಬಪ್ಪ ದಿಬ್ಬಣವ ಇದಿರ್ಗೊಂಬ ॥ 2 ॥

ಉಪ್ಪರಿಗೆ ಒಳವಿಕೆ । ಒಪ್ಪಿಟ್ಟ ಕಲಶವ । ಮಿತ್ರೆಯರು ಹೋಗಿ ತೆಗ ತನ್ನಿ ।
ತೆಗ ತನ್ನಿ ನಮ್ಮನೆಗೆ । ಬಪ್ಪ ದಿಬ್ಬಣವ ಇದಿರ್ಗೊಂಬ ॥ 3 ॥

ಮಾಳಿಗೆ ಒಳವಿಗೆ । ಹೂಡಿಟ್ಟ ಕಲಶವ । ನಾರಿಯರು ಹೋಗಿ ತೆಗ ತನ್ನಿ ।
ತೆಗ ತನ್ನಿ ನಮ್ಮನೆಗೆ । ಬರುವ ದಿಬ್ಬಣವ ಇದಿರ್ಗೊಂಬ ॥ 4 ॥

ಕಲಶ ಕನ್ನಡಿ ಕೊಳ್ಳಿ । ಅರಸಿಯರ್ವೀಳ್ಯವ ಕೊಳ್ಳಿ । ವರುಷಕೊಂದೆರಡು ಮದುವೆಯು ।
ಮದುವೆಯಾಗಲಿ ಎಂದು । ಹರಸಿ ತೆಕ್ಕೊಳ್ಳಿ ಕಲಶವ ॥ 5 ॥

ಕುಂಭ ಕನ್ನಡಿ ಕೊಳ್ಳಿ । ರಂಭೆರ್ವೀಳ್ಯವ ಕೊಳ್ಳಿ । ವರುಷಕೊಂದೆರಡು ಮದುವೆಯು ।

ಮದುವೆ ಆಗಲಿ ಎಂದು । ಬಂದು ತೆಕ್ಕೊಳ್ಳಿ ಕಲಶವ ॥ 6 ॥

ಕಲಶಕೆ ಬಾಗುವಾಗ । ಅರಸಿಯರೇನು ಹರಸಿದಿ । ವರುಷಕೊಂದೆರಡು ಮದುವೆಯು ।
ಮದುವೆ ಆಗಲಿ ಎಂದು । ಹರಸಿ ತೆಕ್ಕೊಳ್ಳಿ ಕಲಶವ ॥ 7 ॥

ಅಪ್ಪ ನಿನ್ನ ಹೆಣ್ಣು ಮಕ್ಕ । ಪಟ್ಟೆಯ ನೆರಿಯವರು । ಬಟ್ಟು ಮುತ್ತಿನ ಕೊರಳವರು ।

ಕೊರಳವರು ಹೆಣ್ಣು ಮಕ್ಕಳು । ಪಟ್ಟೆ ತೆರೆ ಇಲ್ಲದೆ ಹೊರಡಾರ ॥ 8 ॥

ಭಾವ ನಿನ್ನ ಹೆಣ್ಣು ಮಕ್ಕ । ಸಾಲಿಯ ನೆರಿಯವರು । ಸರದ ಮುತ್ತಿನ ಕೊರಳವರು ।
ಕೊರಳವರು ಹೆಣ್ಣು ಮಕ್ಕಳು । ಶಾಲಿ ತೆರೆ ಇಲ್ಲದೆ ಹೊರಡಾರ ॥ 9 ॥

ಸಂಪಿಗೆ ಹೂವಿನ । ಎಂಟು ನೂರೆಸಳಿನ । ಮಂತ್ರಿ ತಮ್ಮಯ್ಯನ ಸೊಬಗಿನ ।
ಸೊಬಗಿನತ್ತಿಗೆಯರು । ನಿಂತಿದಿರುಗೊಂಡ ಕುವರನ ॥ 10 ॥

ಜಾಜಿಯ ಹೂವಿನ ಆರು ನೂರೆಸಳಿನ । ರಾಯ ತಮ್ಮಯ್ಯನ ಸೊಬಗಿನ ।
ಸೊಬಗಿನತ್ತೆಯರು । ಬಂದಿದಿರುಗೊಂಡ ಅಳಿಯನ ॥11॥

## 11.30 ಬೀಗರ ಸ್ವಾಗತ

ಬನ್ನಿರಿ ಬನ್ನಿರಿ । ಸ್ವಾಗತ ನಿಮಗೆ । ನಮ್ಮೀ ಗೃಹದೊಳಗೆ । ಬೀಯಗರೆ ।
ನಮ್ಮೀ ಗೃಹದೊಳಗೆ ॥ ಪ ॥

ಬಂದಿಹ ನಿಮಗೆಲ್ಲ । ಚಂದದ ಆಸನ । ತಂದು ಹಾಸಿರುವೆವು । ಬಂದು ಕುಳಿತುಕೊಳ್ಳಿ ॥ 1 ॥

ಕನ್ನಡಿ ಕಲಶವು । ರನ್ನಗಂಬಳಿಯು । ಪನ್ನೀರುದುಕವು । ಇನ್ನು ಮೊದಲಾದವು ॥ 2 ॥

ಉಟ್ಟುಕೊಳ್ಳುವುದಕ್ಕೆ । ಪಟ್ಟೆಯ ಸೀರೆಯು । ಹಚ್ಚುರಿ ಇಲ್ಲಿದೆ । ಕಸ್ತೂರಿ ಕುಂಕುಮ ॥ 3 ॥

ಅಕ್ಕ ತಂಗಿಯರಿಗೆ । ಸಕ್ಕರೆ ಪಾನಕ । ಇಕ್ಕಿರಿ ಹಾಲನು । ಚಿಕ್ಕ ಬಾಲಕರಿಗೆ ॥ 4 ॥

ಹಾಸು ಮಂಚವು ಇದೆ । ಲೇಸು ವಿಶ್ರಾಮಕೆ । ಬೀಸಣಿಕೆಗಳೂ ಇವೆ ।
ನಿಮ್ಮ ತ್ರಾಸು ಕಳೆವುದಕೆ ॥ 5 ॥

ಕಾಡಿಗೆ ಅರಿಸಿನ । ನೀಡಿಯೆ ನಿಮಗೆ । ಕೂಡಿಯೆ ಎಲೆ ಅಡಿಕೆ ।
ಮಾಡ್ವೆವು ಉಪಚಾರ ॥ 6 ॥

ಬೇಸರ ಕಳೆವುದಕೆ । ರಾಶಿ ಪುಸ್ತಕವಿದೆ । ಆಮೋದ ಗೃಹವಾಸಿ । ಗಣಪನಿಗೊಂದಿಸಿ ॥೭॥

## 11.31 ಹೊಸ್ತಿಲ ಪೂಜೆ

ಗಂಧ ಅಕ್ಷತೆ ತನ್ನಿ । ಗಿಂಡಿಯಲುದುಕವ ತನ್ನಿ । ತೆಂಗಿನ ಕಾಯ ತೆಗ ತನ್ನಿ ।
ತೆಗ ತನ್ನಿರೆನುತಾಲೆ । ಗಣಪತಿಯ ಪೂಜೆ ತೊಡಗಿದ ॥ ಪ ॥

ಹೂವು ಅಕ್ಷತೆ ತನ್ನಿ । ಹೂಜಿಯಲುದುಕವ ತನ್ನಿ । ಬಾಳೆಯ ಹಣ್ಣ ತೆಗ ತನ್ನಿ ।
ತೆಗ ತನ್ನಿರೆನುತಾಲೆ । ಹೊಸ್ತಿಲ ಪೂಜೆಯನೆ ತೊಡಗಿದ ॥ 1 ॥

ಪಟ್ಟೆ ಹೊಚ್ಚುಡನೊದ್ದು । ಮುತ್ತಿನ ಬಾಶಿಗ ಮುಡಿದು । ಮಿತ್ರೆಯನು ತನ್ನ ಬಲದಲ್ಲಿ । ಬಲದಲಿ ಕೂರಿಸಿಕೊಂಡು । ಹೊಸ್ತಿಲಿನ ಪೂಜೆ ತೊಡಗಿದ ॥ 2 ॥

ಸಾಲಿನೂಚ್ಚುಡ ಹೊದ್ದು । ನೀಲದ ಭಾಶಿಗ ಮುಡಿದು । ನಾರಿಯನು ತನ್ನ ಬಲದಲ್ಲಿ । ಬಲದಲಿ ಕೂರಿಸಿಕೊಂಡು । ಬಾಗಿಲಿನ ಪೂಜೆ ತೊಡಗಿದ ॥ 3 ॥

ಉದ್ದಿನ ಬೇಳೆ ಮೇಲೆ । ಇದ್ದವೆ ಮೂರಕ್ಷರ । ಮುದ್ರೆಯುಂಗುರವೇ ಹೊಳೆಯುತ್ತ ।
ಹೊಳೆಯುತ್ತ ಅಣ್ಣಯ್ಯ । ಹೊಸ್ತಿಲಿನ ಪೂಜೆ ತೊಡಗಿದ ॥ 4 ॥

ಹೆಸರಿನ ಬೇಳೆಯ ಮೇಲೆ ಎಸೆದವೆ ಮೂರಕ್ಷರ । ಹರಳಿನುಂಗುರವೇ ಹೊಳೆಯುತ್ತ ।
ಹೊಳೆಯುತ್ತ ತಮ್ಮಯ್ಯ । ಬಾಗಿಲಿನ ಪೂಜೆ ತೊಡಗಿದ ॥ 5 ॥

ಹೊಸ್ತಿಲನೆ ಪೂಜಿಸಿದ । ಹೊಸ್ತಿಲನು ಅರ್ಚಿಸಿದ । ಹೊಸ್ತಿಲಿಗೆ ಕಾಯ ಒಡೆಸಿದ ।
ಒಡೆಸಿದ ತಮ್ಮಯ್ಯ । ಹೊಸ್ತಿಲಿಗೆ ಕರವ ಮುಗಿದಾನೆ ॥ 6 ॥

ಬಾಗಿಲನು ಪೂಜಿಸಿದ । ಬಾಗಿಲನು ಅರ್ಚಿಸಿದ । ಬಾಗಿಲಿಗೆ ಕಾಯ ಒಡೆಸಿದ ।
ಒಡೆಸಿದ ತಮ್ಮಯ್ಯ । ಕರ್ಪೂರದಾರತಿಯ ಬೆಳಗಿದ ॥೭॥

## 11.32 ಸೊಸೆಯ ಗೃಹಪ್ರವೇಶ

ಮುತ್ತ ಸಾಲಿಡುತಾಲೆ ಶ್ರೀ ಲಕ್ಷುಮಿ । ಬಂದಳೆ ಬಲದ ಹೆಜ್ಜೆ ಇಡುತ ।
ಬಂದಳೆ ಬಲದ ಹೆಜ್ಜೆ ಇಡುತ । ಮುತ್ತು ಉಳ್ಳವರ ಮಗಳು ಬರುತಾಳೆ ।
ಡಿರ್ವೇಳೆಯನು ॥ 1 ॥

ಹವಳ ಸಾಲಿಡುತಾಲೆ ಶ್ರೀಲಕ್ಷುಮಿ । ಬಂದಳೆ ಬಲದ ಹೆಜ್ಜೆ ಇಡುತ । ಬಂದಳೆ ॥
ಹವಳ ಉಳ್ಳವರ ಮಗಳು ಬರುತಾಳೆ । ನೋಡಿರ್ವೇಳೆಯನು ॥ 2 ॥

ಮುತ್ತು ಉಳ್ಳವರ್ಮಗಳೆ । ಮುತ್ತ ಸುರ್ಯಲೆ ಒಯ್ಯೆ । ಭಿತ್ತುತ್ತ ಬಾರೆ ಬಯಲಲ್ಲಿ
।
ಬಯಲಲ್ಲಿ ನಮ್ಮೂರಲ್ಲಿ । ಮುತ್ತು ಮಾಣಿಕವೆ ಬೆಳೆಯಲಿ ॥ 3 ॥

ಹವಳ ಉಳ್ಳವರ್ಮಗಳೆ । ಹವಳ ಸುರ್ಯಲೆ ಒಯ್ಯೆ । ಹರಡುತ್ತ ಬಾರೆ ಬಯಲಲ್ಲಿ ।
ಬಯಲಲ್ಲಿ ನಮ್ಮೂರಲ್ಲಿ । ಹವಳ ಮಾಣಿಕವೆ ಬೆಳೆಯಲಿ ॥ 4 ॥

ಊರು ತುಂಬಲಿ ನಮ್ಮ । ಕೇರಿ ಕೋರೈಸಲಿ । ಊರಿದ ತೋರಣವೆ ಚಿಗುರಲಿ ।
ಚುಗುರಲಿ ನಮ್ಮನೆಯ । ಸೊಸೆ ಬಂದು ಮನೆಯ ತುಂಬುವಾಗ ॥ 5 ॥

ಕೇರಿ ತುಂಬಲಿ ನಮ್ಮ । ಕೊಟ್ಟಿಗೆಯು ತುಂಬಿರಲಿ । ನೆಟ್ಟ ತೋರಣವೆ ಚಿಗುರಲಿ ।
ಚಿಗುರಲಿ ನಮ್ಮನೆಯ । ಸೊಸೆ ಬಂದು ಮನೆಯ ತುಂಬುವಾಗ ॥ 6 ॥

## 11.33 ವಧೂಪ್ರವೇಶ

ಬಂದ । ಮಂದಿರಕೆ ಸಿರಿಯ ತಂದ । ಮಂದಿರಕೆ ಸಿರಿಯ ತಂದ ॥ ಪ ॥
ನಂದ ಕಂದ ಚಂದ । ದಿಂದ ಬಂದು ನಿಂದ ।
ಮಂದಹಾಸದ ಮುದ್ದು ಮೊಗದ ನಂದನೆಯ ಸಹಿತ ಬಂದ ॥ ಅ.ಪ ॥

ಅತ್ತ ರುಕುಮ ತನ್ನನುಜೆಯ । ಮತ್ತೆ ಶಿಶುಪಾಲಂಗೀವ ವಾರ್ತೆಯ ।
ಚಿತ್ತದ್ವಲ್ಲಭ ಬಾ ಎಂದು ಹರಿಯ । ಮತ್ತೆ ಕರೆಸಿದಾ ಸತಿಯ ॥ 1 ॥

ಅಂಬಿಕಾ ಪೂಜೆಯ ನೆವದಿ । ಅಂಬುಜಾಕ್ಷಿ ಬಂದ ವೇಳ್ಯದಿ ।
ಸಂಭ್ರಮವ ನೋಡಿ ಶೀಘ್ರದಿ । ಬಂಡಿಯೊಳಗೆ ಕೂಡ್ರಿಸಿ ಜವದಿ ॥ 2 ॥

ಆರು ಅರಿಯದಂತೆ ಸೇರಿ । ಸಾರಸಾಕ್ಷ ಶ್ರೀ ಮುರಾರಿ ।
ನಾರಿ ರತುನ ತಂದು ಈ ಪರಿ । ದ್ವಾರದಲ್ಲಿ ನಿಂದ ಶ್ರೀಹರಿ ॥ 3 ॥

## 11.34 ಚಿಟ್ಟು ಹೊಯ್ದಿದ್ದು

ಚಿಟ್ಟ ಹೊಯ್ಯೆ ನೀ ಬಾ ಸೀತೆ । ದಿಟ್ಟ ಸಂಜಾತೆ ॥ ಪ ॥

ಉರುರು ಗಣ್ಣಿನ ಬಾಲೆ । ಸುಗುಣೆ ನೀ ಸುಶೀಲೆ । ಜಗದೋದ್ಧಾರನ ಸುಮ ಜ್ವಾಲೆ ।
ಮುಗುದೆ ಕೋಮಾಲೆ ॥ 1 ॥

ಹಸ್ತ ಕಡಗ ಚೂಡ್ಯ । ವಿಸ್ತರಿಸಿಹ ವಾದ್ಯ । ವಿಸ್ತಾರದಲಿ ಮೆಲ್ಲನೆ ।
ನಿನ್ನ ಹಸ್ತಗಳನು ನೀಡೆ ॥ 2 ॥

ಕುಂಕುಮ ಕಸ್ತೂರಿ ಬೊಟ್ಟು । ಎಸೆವ ಮೂಗುತಿ ಇಟ್ಟು ।
ಕುಸುಮ ನಾಭನ ಕೈಕಟ್ಟು । ಎಸೆವ ಮಣಿ ಇಟ್ಟು ॥ 3 ॥

## 11.35 ವಧೂ ವರರಿಗೆ ಆರತಿ

ಮಾರನ ತಾತಗೆ ॥ ಆರತಿ ಬೆಳಗೆ । ನಾರಿ ಶಿರೋಮಣಿಯೆ ॥
ನೀರೆ ಬಾರೆ । ನಾರಿಶಿರೋಮಣಿಯೆ ॥ ಪ ॥

ಅರ್ತಿಲಿ ಬೆಟ್ಟವ ಎತ್ತಿಹನಂತೆ । ಮತ್ತೆ ಕರಡಿಯ ಮಗಳನು ವರಿಸುವನಂತೆ ।
ಹತ್ತವತಾರದಿ ಭಕ್ತರ ಸಲಹುವ । ಸತ್ಯಭಾಮ ಪ್ರಿಯಗೆ ॥ ನೀರೆ॥

ಶರಧಿ ಶಯನನಾಗಿ ಇರುತಿಹನಂತೆ । ಶರಧೀಶ ಸುತೆಯನ್ನು ವರಿಸುವನಂತೆ ।
ಭರದಿ ಸುರರಿಗೆ ಅಮೃತವ ತಂದೆರೆದಿಹ । ಕರುಣಾನಿಧಿ ಸಿರಿವರಗೆ ॥ನೀರೆ॥

ಪಂಚ ಪಾಂಡವರಿಗೆ ಪರಮ ಪ್ರಿಯನಂತೆ । ಪಾಂಚಾಲಿಯ ಮನ ಕಾಯ್ದವನಂತೆ ।
ಕೊಂಚ ನಿಲ್ಲದೆ ಕೌರವರನು ಕೆಡಹಿದ । ಪಂಚಮುಖನ ಸಖಗೆ ॥ನೀರೆ॥

## 11.36 ಹೆಣ್ಣೊಪ್ಪಿಸಿದ್ದು

ಬೇಸರವೇತಕೆ । ಬಾಸುರಾಂಗಿಯರೆ ।
ತೋಷದಿಂದಲಿ ಇವಳನ್ನು ಸಾಕಿ ಸಲಹುವರು ॥ ಪ ॥

ಯೋಚನೆ ಏತಕೆ ನೀತಿಯ ಕಾರ್ಯಕೆ । ತೋಷದಿಂದಿವಳನ್ನು ಸಾಕಿ ಸಲಹುವರು ॥ 1 ॥

ವಿದ್ಯಾವಂತನು ಪತಿ ಬುದ್ಧಿಯುಳ್ಳವನು । ತಿದ್ದಿಕೊಂಡಿವಳನ್ನು ಉದ್ಧರಿಸುವನು ॥ 2 ॥

ನೀತಿವಂತಳು ಅತ್ತೆ । ಪ್ರೀತಿಸುವಳು ಮತ್ತೆ ।
ಜಾತೆಯಂದದಲತಿ ನೀತಿ ಬೋಧನೆ ಗೈದು ॥ 3 ॥

ಕಾಮಧೇನುವೆ ಕಲ್ಪವೃಕ್ಷದಂದದಲಿ । ಸೂಸುತಿರಲಿ ಸಿರಿ ಸಂಪತ್ತು ಈ ಗೃಹದಿ ॥ 4 ॥

## 11.37 ಉಡಿ ತುಂಬಿದ್ದು

ಶ್ರೀಕೃಷ್ಣರಾಯರ ಪಾದಕ್ಕೆ ನಮಿಸಿ । ಲೋಕದೊಡತಿ ಶಾರದಾಂಬೆಯ ಸ್ತುತಿಸಿ ।
ಕೊಲ್ಲೂರ ಮೂಕಾಂಬಿಕೆ ಉಡಿಲ ತುಂಬುವ ಪದನ । ಏಕಚಿತ್ತದಲಿ ಪೊಗಳುವಿ ॥ 1 ॥

ಹರಪಾರ್ವತಿ ಹಸೆಮಣೆ ಮೇಲೊಪ್ಪಿರಲು । ತ್ರಿಭುವನದೊಳಗೆಲ್ಲ ಸತಿಯರು ಬಂದು
।

ಊರ್ವಿಯ ಮೇಲೆ ಬೆಳೆದಂಥ ಫಲಗಳ । ಊರ್ವಿಗೆ ತುಂಬಿದರೆ ಉಡಿಲನು ॥ 2 ॥

ಸಣ್ಣಕ್ಕಿ ಬಿಳಿ ಎಲೆ ಹಣ್ಣಡಿಕೆಗಳು । ಸ್ವರ್ಣಲಗೌರಿಗೆ ಉಡಿಲ ತುಂಬುವರು ।
ಹೊಂದ್ವಲೆ ಭಾಗ್ಯವ ಕೊಡು ತಾಯೆ ಎನುತ । ಪ್ರಸನ್ನೆಗೆ ತುಂಬಿದರೆ ಉಡಿಲನು ॥ 3
॥

ದೇವೇಂದ್ರನ ಪಟ್ಟದರಸಿ ತಾ ಬಂದು । ದಾಳಿಂಬೆ ದ್ರಾಕ್ಷಿಯ ಫಲಗಳ ತಂದು ।
ದಾನವ ಮರ್ದನ ದೇವಿ ಸುಖ ಬಾಳೆನುತ ।
ಮಹದೇವಿಯರು ತುಂಬಿದರೆ ಉಡಿಲನು ॥ 4 ॥

## 11.38 ಮಾಲೆ ನೀಡಿದ್ದು

ಮಾಲೆಯ ನೀಡಿದಳು । ರುಗುಮಿಣಿ ದೇವಿ । ನಾರಾಯಣ ಸ್ವಾಮಿಗೆ ॥ ಪ ॥
ಯಾವಾಗಲೂ ತನ್ನ ಅಗಲದೆ ಇರು ಎಂದು ।
ಪ್ರಾಣದ್ವಲ್ಲಭ ನರಸಿಂಹ ಮೂರುತಿಗೆ ॥ ಅ.ಪ ॥

ಧರಣಿಯ ಭಾರವನು । ಇಳುಹಲು ಮುನಿಗಳ ಪ್ರೀಯನಿಗೆ । ಕೊರಳ ಶಂಖ ಚಕ್ರ ।
ಮೆರೆವ ರೂಢಿಯ ವೀರ । ತುರುಗಳ ಕಾಯ್ವಂಥ ಶ್ರೀ ಕೃಷ್ಣ ಹರಿಗೆ ॥ 1 ॥

ನೀರೊಳು ಮುಳುಗಿದಗೆ । ಅಮೃತವ ದೇವತೆಯರಿಗಿತ್ತಗೆ । ಮೇಧಿನಿ ಮಂಚದಿ
ತೋರುವ ಸುರನದಿ । ಬಾಲ ಭಾಸ್ಕರ ತೇಜ ಕಂಬದಿಂದೊಡೆದನಿಗೆ ॥ 2 ॥

ಕಂಬದಿಂದೊಡೆದನಿಗೆ । ಹಿರಣ್ಯಾಕ್ಷ ಕರುಳ ಮಾಲೆಯ ಧರಿಸಿ । ತಂದೆಯ ಕೊಂದು ।
ಕಂದನ ಮನ್ನಿಸಿ । ಚಂದದಿಂ ಸಲಹಿದ ನರಸಿಂಹವತಾರಗೆ ॥ 3 ॥

ಮುತ್ತಿನ ಕೊಳಲ ತಾನು । ನುಡಿಸುತಲೀಗ । ಮಿತ್ರೆಯರೊಲಿಸಿದಗೆ । ಮಿತ್ರೆ ರುಗುಮಿಣಿ
ಅಭಿಮಾನವ ಕಾಯೆಂದು । ಅಚ್ಯುತಾಧರ ಶ್ರೀ ಕಲ್ಲಾಕ್ಯ ವೆಂಕಟಗೆ ॥ 4 ॥

## 11.39 ಎಬ್ಬಿಸಿದ್ದು

ಗೋವಿಂದ ಬೆಳಗಾಯಿತೇಳಯ್ಯ ಕೃಷ್ಣ ॥ ಪ ॥
ಕಾವೇರಿ ತೀರದಲ್ವಾಸ ಶ್ರೀರಂಗಧಾಮ ॥ ಅ.ಪ ॥

ಶೇಷನ್ಹಾಸಿಗೆಯ ಮೇಲುಲ್ಲಾಸದಿಂದ ಪವಡಿಸಿ ।
ದೇಶ ದೇಶದ ಸುರಜನ ಸಹಿತ । ಸಾಸಿರನಾಮನೆ ನಿನ್ನ ಹಾಡುತ್ತ ಪಾಡುತ್ತ ।
ವೇದ ಘೋಷದ ಹೊತ್ತಾಯಿತು ಇನ್ನೇಳಯ್ಯಾ ಸ್ವಾಮಿ ॥ 1 ॥

ಎಡದಲ್ಲಿ ಶ್ರೀದೇವಿ । ಬಲದಲ್ಲಿ ಸತ್ಯಭಾಮೆ । ನಡುವೆ ಶ್ರೀ ಕೃಷ್ಣರು ಪವಡಿಸಲು ।
ಹದಿನಾಲ್ಕು ಲೋಕದೊಳ್ ಉಳ್ಳಂತ ಭಕ್ತರು ।
ಸ್ವಾಮಿ ಪಾದವ ಕಾಣುವೆವೆಂದೆ ನಿಂತಿಹರು ॥ 2 ॥

ಅಚ್ಯುತಾನಂತನೆ ಏಳೊ । ಸಚ್ಚಿದಾನಂದನೆ ಏಳೊ । ಹೆಚ್ಚಿನ ಮುತ್ತು ಮಾಣಿಕಧರನೆ
। ಆಶ್ಚರ್ಯದ ಮುದ್ದೆ ಏಳೊ । ಮೋಹದ ಕಂದಯ್ಯ ಏಳೊ ।
ಸೂರ್ಯನ ಉದಯವಾಯಿತು ಇನ್ನೇಳಯ್ಯಾ ರಂಗಾ ॥ 3 ॥

ಶಂಖ ಚಕ್ರ ಗದಾ ಪದ್ಮ । ಆಲೈಸುತ್ತಿರುವರೊ ।
ಝಿಂಕು ಝಿಂಕೆನುತ ಮೆಲ್ಲಡಿಯಿಡುತ । ಶಂಖದಾ ಧ್ವನಿ ಕೇಳಿ ಹಾಡುತ್ತ ಪಾಡುತ್ತ ।
ಪಂಕಜನಾಭ ಶ್ರೀ ಉಡುಪಿಯ ಕೃಷ್ಣಯ್ಯ ॥ 4 ॥

----- ****** -----

# 12 ಶಿವ

## 12.1 ಶಿವ ಸ್ತುತಿ

ಹರಶಿವ ಓಂಕಾರ । ನಿನ್ನಯಾ ಚರಣಕೆ ನಮಸ್ಕಾರ ॥ಕರುಣಾ ಸಾಗರ ।
ಕರುಣದಿ ಪೊರೆಯೋ ಶ್ರೀ ಶಂಕರ ॥ ಪ ॥

ಅಂಬಾಪತಿ ದಿಗಂಬರ ನಿನ್ನನು । ನಂಬಿದೆ ಕಾಯೋ ವಿಶ್ವಂಭರ ॥
ಕಂಬು ಕಂದರ । ಬೆಂಬಿಡದೆ ಪೊರೆ । ಶಂಭೋ ಶ್ರೀ ಶಂಕರ ॥ 1 ॥

ಮಂಗಳಾಂಗ ಭುಜಂಗ ಭೂಷಣ । ಮಂಗಳಗೌರಿ ಮನೋಹರ ॥
ತುಂಗ ವೈಭವದಿ ಮೆರೆವ । ಶ್ರೀ ಗಂಗಾಧರ ॥ 2 ॥

ಅಂಧಕಾರ ಭವ ಬಂಧ ವಿಮೋಚನ । ಸುಂದರ ಮೂರುತಿ ಇಂದುಧರ ॥
ಕಂದುಗೊರಳಿನ ದಯಾಸಿಂಧುವೆ । ಶ್ರೀ ಗೌರೀಶಂಕರ ॥ 3 ॥

## 12.2 ಶಿವ ಸ್ತುತಿ

ಜಯದೇವ ಜಯದೇವ । ಜಯಮಾಂ ಗಿರೀಶ ॥ ಸ್ವಯಂಜ್ಯೋತಿ ಬೆಳಗುವೆ ।
ಸಚ್ಚಿ ಸುಖ ತೋಷ ॥ ಪ ॥

ಸರ್ವರೊಳು ನೋಡಿದರೂ ನೀನಿಲ್ಲದಿಲ್ಲ । ಊರ್ವಿ ಆಕಾಶ ದಶ ದಿಕ್ಕುಗಳೂ ಎಲ್ಲ ॥
ಸರ್ವೇಶ್ವರನೆಂಬುವುದು ಸರ್ವಾಂಗವೆಲ್ಲ । ಪಾರ್ವತೀಶ್ವರನೆಂದು ಬಲ್ಲವರೇ ಬಲ್ಲ ॥ 1 ॥

ಸಕಲ ಸುಖ ದುಃಖ ಎಂಬುದು ನಿನ್ನಯ ಲೀಲೆ । ಅಖಿಲ ಘಟಗಳೆಂಬುದು ನಿನ್ನ ಭೋಜನ ಶಾಲೆ ॥ ಭಕ್ತಿ ಭಾವವೆಂಬುದು ಜ್ಞಾನದ ದೀಪಜ್ವಾಲೆ ।
ಪ್ರಕಟಿಸುವಂತೆ ಎತ್ತುವೆ ನಿನ್ನಯ ಮೇಲೆ ॥ 2 ॥

ಪರಿಶುದ್ಧಾತ್ಮಕ ದೇವ । ನಿರುತ ನಿರ್ದೋಷ । ಸಕಲ ಜನರ ಹೃದಯ ಕಮಲ ನಿವಾಸ ॥
ದುಃಖ ದಾರಿದ್ರ್ಯ ಭವ ಭಯ ದುಃಖ ವಿನಾಶ ।
ಶ್ರೀ ಗುರು ವಿಮಲಾನಂದ ಶ್ರೀ ಮಾಂ ಗಿರೀಶ ॥ 3 ॥

## 12.3 ಶಿವ ಪರ

ಜಯ ಜಯ ಶಂಕರ ಗೌರೀಶ । ಶಾಂತ ದಯಾಪರ ಸರ್ವೇಶ । ಜಯತು ಗಿರೀಶ ।
ಜಯತು ಮಹೇಶ । ಜಯ ಜಯ ಜಯ ಜಯ ಜಗದೀಶ ॥ ಪ ॥

ರಜತಾದ್ರಿ ಗಿರಿ ಪುರ ನಿವಾಸ । ಸತತವು ಭಜಕರ ಹೃದಯ ನಿವಾಸ ।
ಭಜಿಸುವ ಭಕ್ತರ ಪೊರೆಯೊ ಮಹೇಶ । ಈಶ ಮಹೇಶನೆ ಶೇಷ ವಿಭೂಷ ॥ 1 ॥

ಹಾಲಾಹಲವನು ಪಾನವ ಮಾಡಿದೆ । ನೀಲಕಂಠನೆಂಬ ನಾಮವ ಪಡೆದೆ ।
ಲೀಲೆಯಿಂದಲಿ ಈ ಜಗವ ಪಾಲಿಸಿದೆ । ಲಾಲಿಸೋ ಭಕ್ತರ ಮೊರೆಯ ಹೇ ಪ್ರಭುವೆ ॥ 2 ॥

ದಶಶಿರ ದೈತ್ಯನ ತಪಕೆ ನೀನೊಲಿದೆ । ಅಸುರಗೆ ಪ್ರಾಣಲಿಂಗವ ನೀ ನೀಡಿದೆ ।
ಹಸುಳೆ ಮಾರ್ಕಾಂಡೇಯಗೊಲಿದೆ ಪಾಲಿಸಿದೆ । ಶಶಿಧರ ನಿನ್ನಯ ಚರಣಕೆ ನಮಿಪೆ ॥ 3 ॥

ವರ್ಣಿಸಲರಿಯೆನು ನಿನ್ನ ಲೀಲೆಗಳಾ । ಮನ್ಮಥ ಜನಕನೆ ಮಾಡು ನೀ ದಯವಾ ।
ಎನ್ನಪರಾಧವ ಕ್ಷಮಿಸುತ ದೇವಾ । ಮನ್ನಿಸಿ ಕಾಯೋ ಪನ್ನಗ ಹಾರಾ ॥ 4 ॥

ನಾನೆಂಬ ಹೀನತೆ ಗುಣಗಳ ಬಿಡಿಸೊ । ಎನಗೊದಗಿದ ಭವ ಬಂಧನ ಬಿಡಿಸೊ ।
ನಿನ್ನ ಧ್ಯಾನಿಸುವ ಸದ್ಬುದ್ಧಿಯ ಕರುಣಿಸು । ಎನ್ನ ನಿನ್ನಯ ಪಾದದಡಿಯಲಿ ಸೇರಿಸು ॥ 5 ॥

## 12.4 ಶಿವ ಪರ

ಮಂಗಲ ಸ್ವರೂಪನಿಗೆ । ಮಂಗಲ ಸ್ವರೂಪನಿಗೆ । ಮಂಗಲಾರತೀಯ ಗೈವೆ ।
ಮಂಗಲಾವನೆ । ಕೋರೀ । ಮಂಗಲಾವನೆ ॥ ಪ ॥

ರೋಗ ರುಜಿನ ದಹಿಸಿ ಎನಗಾ । ರೋಗ್ಯ ಲಭಿಸುವಂತೆ ಗೈಯ್ಯೋ ।
ಸಕಲ ಸುಖವನು । ಈಯೋ । ಸಕಲ ಸುಖವನು ॥ ಅ.ಪ ॥

ಹಿರಿಯದಾದ ಗುಣಗಳನ್ನು । ಹರನ ಸತಿಯ ರೂಪವನ್ನು ।
ವರದಿ ಕರುಣಿಸೈ । ಹರನೆ । ವರದಿ ಕರುಣಿಸೈ ॥ 1 ॥

ಚಿರ ಸುಮಂಗಲಿಯು ನಾನಾ । ಗಿರುವ ತೆರದಿ ಅನುಗ್ರಹಿಸೊ ।
ಪರಮಾಯುಷ್ಯವಾ । ಪೊಂದಿ । ಪರಮಾಯುಷ್ಯವಾ ॥ 2 ॥

ದೇವ ಮಹಾದೇವ ವಂದೇ । ಕಾವುದೆನ್ನ ಹರಸಿ ತಂದೆ ।
ಸಕಲ ಸುಖವನು । ಈಯೋ । ಸಕಲ ಸುಖವನು ॥ 3 ॥

## 12.5 ಶಿವ ಸ್ತುತಿ

ಜಗದೀಶಾ ಸರ್ವೇಶ । ಗತಿ ನೀನೆನಗೆ ಸೋಮೇಶಾ ॥ ಪ ॥

ಕನಸಲಿ ಮನಸಲಿ ನಿನ್ನದೇ ಧ್ಯಾನಾ । ನಿನ್ನ ದರುಶನಕೆ ಎನ್ನ ತನುಮನ ॥
ನೀಡು ನೀ ದಯವನು ಪಾರ್ವತಿ ರಮಣ । ಹರುಷ ಪಡಲು ಎನ್ನ ಜನುಮ ಪಾವನ ॥ 1 ॥

ಪ್ರಣವಾತ್ಮನು ಪರಮಾತ್ಮನು ನೀನೆ । ಎನ್ನ ಜೀವನದ ನಿಲಯವು ನೀನೆ ॥
ಪಂಚಾಕ್ಷರ ಪರಬ್ರಹ್ಮನು ನೀನೆ । ಪಂಚಭೂತಗಳ ಒಡೆಯನು ನೀನೆ ॥ 2 ॥

## 12.6 ಶಿವ ಸ್ತುತಿ

ಬಂದಿರುವೆ ॥ ನಾ ॥ ನಿನ್ನಲ್ಲಿ ಗಿರಿಜಾಧವ ॥ ದೇವ ಗಂಗಾಧರಾ ।
ದಯೆತೋರೋ ದೇವಾ ಉಮಾಶಂಕರಾ ॥ ಪ ॥

ತಾಂಡವದಲಿ ನೀನು ಮೈಮರೆತೆಯಾ । ಬಡವಳ ಈ ಕೂಗ ನೀ ಕೇಳೆಯಾ ॥
ಎಂದೆಂದೂ ಎಡಬಿಡದೆ ನಾ ನಂಬಿದೆ । ಬಂದೆನ್ನ ಕಾಯೋ ಗಿರೀಶಾ ॥ 1 ॥

ಕರುಣಾಮಯಾ ನಿನ್ನ ಬಳಿ ಬಂದಿಹೆ । ಕರುಣೆಯ ತೋರೋ ದಯಾಶಂಕರಾ ॥
ನಿರುತ ಎನ್ನಯ ಮನದಿ ನೆಲೆಯಾಗಿರು । ಗುರು ಮಂಗಳೇಶ ಕಲ್ಲೇಶ ಗಿರೀಶ ॥ 2 ॥

## 12.7 ಶಿವ ಸ್ತುತಿ

ವಂದನೆಯ ಮಾಡುವೆನು । ಇಂದುಶೇಖರ ನಿನಗೆ ॥
ಹೊಂದಿರುವ ಭವದ ಈ । ಬಂಧನವ ಬಿಡಿಸೊ ॥ ಪ ॥

ನೊಂದೆನೀ ದೇಹದೊಳ್ । ಬಂಧು ಬಾಂಧವನು ನೀ ॥
ಎಂದು ನಂಬಿದೆನು ನಾ । ನೀ ಬಂದೆನ್ನ ಕಾಯೋ ॥ 1 ॥

ಸ್ವಾರ್ಥಕೆನ್ನುತ ದುಡಿದು । ವ್ಯರ್ಥವಾಯಿತು ಜನ್ಮ ॥
ಸಾರ್ಥಕವ ನೀಡೆಂದು । ಪ್ರಾರ್ಥಿಸುವೆನಯ್ಯಾ ॥ 2 ॥

ಕರುಣವಾರಿಧಿ ನಿನ್ನೊಳ್ । ಶರಣು ಬಂದಿಹ ಎನ್ನ ॥
ದುರಿತಗಳ ಪರಿಹರಿಸಿ । ಪೊರೆಯೊ ಸಂಪನ್ನ ॥ 3 ॥

ಸತಿಗೆ ಕರೆದಿತ್ತೆಯೊ । ಹಿತದಿ ತಾರಕ ಬೋಧೆ ॥
ಪತಿತಳಾದೆನಗೆ ಸದ್ಗತಿ । ನೀನೆ ಕಾಯೋ ॥ 4 ॥

ನೀಲಕಂಠನೆ ಮುಡಿಯ । ಮೇಲಿರುವ ಮಲ್ಲಿಗೆಯ ॥
ಮಾಲೆಯಾದರು ಒಂದ । ನೀಡು ದಯದಿಂದ ॥ 5 ॥

## 12.8 ಶಿವ ಸ್ತುತಿ

ಓಂ ನಮಃ ಶಿವಾಯ ಶಂಕರ । ಓಂ ನಮೋ ಗಂಗಾಧರ ॥
ಓಂಕಾರ ಪ್ರೀತ । ಶಂಕರಿ ಸಮೇತ । ಶರಣು ಜನರ ಶೋಕ ಭಯಹರ ॥ ಪ ॥

ಕೊರಳ ರುಂಡಮಾಲೆ ಭೀಕರ । ಧರಿಸಿರುವೆ ಏಕೋ ಶಂಕರ ॥
ಶರಣು ಜನಕೆ ಪ್ರೀತಿ । ದುರುಳ ಜನಕೆ ಭೀತಿ । ಸಾಂಬಶಿವ ಶ್ರೀ ದಿಗಂಬರ ॥ 1 ॥

ಲಿಂಗರೂಪಿ ಶಂಭು ಶಂಕರ । ಮಂಗಳಾಂಗ ಮಹಾ ಸುಂದರ ॥
ಗಜಚರ್ಮಧಾರಿ । ಗೌರಿ ಮನೋಹರ । ಮುಡಿಯ ಮೇಲೆ ಅರ್ಧ ಚಂದಿರ ॥ 2 ॥

ದಿಗ್ದಿಗಂತವೇ ಶಂಕರ । ನಿನ್ನ ಮನವೆ ಎನ್ನ ಮಂದಿರ ॥
ನಾಟ್ಯವಾಡಿ ಬಾರಾ । ಕ್ಲೇಷ ಕಷ್ಟ ದೂರ । ಚೆನ್ನಕೇಶವಾದ್ರಿ ಗೋಚರ ॥ 3 ॥

## 12.9 ಶಿವ ಸ್ತುತಿ

ಗೌರಿ ಪ್ರಿಯಾ । ತೋರೊ ದಯಾ । ದೇವಾದಿ ದೇವಾ । ದಯಾಸಾಗರಾ ॥ ಪ ॥

ಬೇಡುವೆನಯ್ಯಾ ನಾ ಮನದಿ ದೇವಾ । ನೀಡಯ್ಯ ಎನಗೆ ಹೃದಯಾ ಪ್ರಸಾದ ।
ಘನ ಲಿಂಗ ರೂಪಿ ಗಂಗಾಧರಾ । ನಂಜುಂಡ ಹರನೆ ಹೇ ತಾಂಡವಾ ॥ ಅ.ಪ ॥

ಭಕ್ತಿಯನರಿಯೆ । ಭಾವವ ತಿಳಿಯೆ । ಭಕ್ತಪ್ರಿಯಾ ನಿನ್ನ ಮಹಿಮೆಯನರಿಯೆ ।
ಭಕ್ತಿಯನಿತ್ತು ದಯಪಾಲಿಸು । ಮುಕ್ತಿಯ ನೀಡೊ ಮಹದೇವನೆ ॥ 1 ॥

ಪರಿಪಾಲಿಸಯ್ಯಾ ವರ ಸುಪ್ರಸಾದ । ಸ್ಥಿರವಾಗಿ ಮುಡಿಯಲ್ಲಿ ಶೋಭಿಸುವಂಥ ।
ವರ ಪಾಲಿಸಯಾ ಸೌಭಾಗ್ಯದಾ । ಕರುಣಾಳು ನಿನ್ನ ಬಳಿ ಬಂದಿಹೆ ॥ 2 ॥

ಅಜ್ಞಾನಿ ನಾನು । ಸರ್ವಜ್ಞ ನೀನು । ಸುಜ್ಞಾನವನ್ನು ದಯಪಾಲಿಸು ।
ಹೇ ರುಂಡಮಾಲಾ ಧರ ಶಂಕರಾ । ನಂಜುಂಡ ಹರನೆ ಹೇ ತಾಂಡವಾ ॥ 3 ॥

## 12.10 ಶಿವ ಪೂಜೆ

ಬಾರೆ ನೋಡುವಾ । ಪರಶಿವನ ಪೂಜೆಯಾ ॥ ಪ ॥

ವಿದ್ಯಾವಂತ ಜನರು । ಶುದ್ಧ ಮಂತ್ರದೊಳು ।
ಶ್ರದ್ಧೆಯಿಂದ ಮಾಳ್ಪ । ರುದ್ರಗಭಿಷೇಕವನು ॥ 1 ॥

ಅಂದವಾದ ಗಂಧ । ಚಂದನಗಳಿಂದ ।
ಇಂದುಧರಗೆ ಮಾಳ್ಪ । ಚಂದದಾ ಪೂಜೆಯನು ॥ 2 ॥

ಮಲ್ಲಿಗೆ ಪುಷ್ಪಗಳು । ಚೆಲ್ವ ಸಂಪಿಗೆಯು । ಬಿಲ್ವಪತ್ರೆಗಳನು । ಚಲ್ವಗೇರಿಸುವುದಾ ॥ 3 ॥

ನೇಮದಿಂದ ಜನರು । ಸೋಮವಾರದೊಳು ।
ಪ್ರೇಮದಿಂದ ಸಹಸ್ರ । ನಾಮ ಪೂಜೆಗಳನು ॥ 4 ॥

## 12.11 ಶಿವನಿಗೆ ಆರತಿ

ಆರತಿಯ ಮಾಡುವೆವು ಮಾರಹರ ನಿನಗೀಗ ॥ ಪ ॥

ಸೇರುತೆಲ್ಲರೂ ಬಂದು ಭೂರಿ ತೋಷದೊಳು ॥ ಅ.ಪ ॥

ಶಂಕರಿಯ ಪ್ರಿಯ ಭಜಕ । ಸಂಕಟವ ಹರಿಸೆನುತ ।
ಶಂಖ ಜಾಗಟೆ ಗೈವ । ಓಂಕಾರ ನಾದ ॥ 1 ॥

ಕಪ್ಪುಗೊರಳನೆ ಪತ್ರೆ । ಪುಷ್ಪಗಳ ಅರ್ಪಿಸುತಾ ।
ತಪ್ಪದೆ ಗೈಯುವೆವು । ಕರ್ಪೂರಾರತಿಯಾ ॥ 2 ॥

ಕಂದುಗೊರಳನೆ ಮುಂದೆ । ತಂದಿಟ್ಟ ನೈವೇದ್ಯ ।
ಬಂದು ಸ್ವೀಕರಿಸೆಂದು । ವಂದಿಸುವೆ ಜೀಯಾ ॥ 3 ॥

ಪಾಪಹರ ಪರಮೇಶ । ರೂಪ ರವಿಯ ಪ್ರಕಾಶ ।
ಪಾಪ ಹರಿಸಲು ತೋರ್ವೆವು । ಧೂಪ ದೀಪಗಳಾ ॥ 4 ॥

ಮಲ್ಲಿಗೆಯ ಸುಮಗಳನು । ಚೆಲ್ಲುವೆವು ಮುಡಿಯಲ್ಲಿ ।
ಉಲ್ಲಾಸದಿಂದ ಪೊರೆ । ಚೆಲ್ವ ರಾಮೇಶಾ ॥ 5 ॥

## 12.12 ಶಿವನಲ್ಲಿ ಹೂ ಬೇಡಿದ್ದು

ಕರುಣಾಳು ದೇವ ಬಾರೊ । ಕರವೀರ ಹೂವ ತಾರೋ ।
ಸುರಜಾಜಿ ಸಂಪಿಗೆಯ । ಪರಿಮಳ ಮಲ್ಲಿಗೆಯ ॥ ಪ ॥

ನಂದೀಯನೇರಿ ನಿಂದ । ನಂದೀಶ ದೇವ ಬಾರೊ ।
ಕುಂದನೆಣಿಸದಂಥ । ಸುಂದರ ಹೂವ ತಾರೊ ॥ 1 ॥

ಭಕ್ತವತ್ಸಲ ಬಾರೊ । ಭಕ್ತಿ ಪ್ರಸಾದ ತಾರೊ ।
ಶಕ್ತಿಯ ಸಹಿತಲಿ ನೀ । ಮುಕ್ತಿಯ ನೀಡು ಬಾರೊ ॥ 2 ॥

ದೇಹವ ತಂತಿ ಮಾಡಿ । ಜೀವದ ನಾದ ಹೂಡಿ ।
ಮೋಹದ ಕಳೆಯ ದೂಡಿ । ಪಾಲಿಸು ದಯೆಯ ನೀಡಿ ॥ 3 ॥

ಈಶ ಮಹೇಶ ಬಾರೊ । ಸರ್ವೇಶ ಸುಖವ ತೋರೊ ।
ನೀಡೀಗ ಪುಷ್ಪ ಹಾರ । ಹರಿಸೀಗ ಭವದ ಭಾರ ॥ 4 ॥

ಕೈಲಾಸ ಗಿರಿ ನಿವಾಸ । ಕೈವಲ್ಯ ಈವ ತಾತ ।
ಭಕ್ತ ಹೃದಯ ವಾಸ । ಸತ್ಯ ಪ್ರಕಾಶ ಈಶ ॥ 5 ॥

## 12.13 ಶಿವನಲ್ಲಿ ಹೂ ಬೇಡಿದ್ದು

ಹೂವ ಪಾಲಿಸೊ ದೇವನೆ । ನಾರಿಯರಿಗೆ । ನಾಗಸಂಪಿಗೆ ಪುಷ್ಪವಾ ॥ ಪ ॥

ಅಚ್ಚ ಮಲ್ಲಿಗೆ ಹೂವ । ಸ್ವಚ್ಛ ಮನಸಿನಿಂದ । ಸಚ್ಚಿದಾನಂದನೆ । ಇಚ್ಛಿಪ ಬಾಲಕಿಯರಿಗೆ ।

ಮೆಚ್ಚಿ ನೀ ದಯಪಾಲಿಸೊ । ಸದಾಶಿವ ॥ ಅ.ಪ ॥

ಡಮರುಗಧಾರಿಯೆ ನೀ । ಉಮೇಶನೆ । ಕಮಲನಾಭನ ಸಖನೆ ॥

ಕಾಮಸಂಹಾರನೆ । ನಾಮಸಹಸ್ರದೊಳು । ಪ್ರೇಮದಿ ನಿನ್ನಯ ಮುಡಿಯ ಮೇಲಿರುವಂಥ ।

ನಾಗಸಂಪಿಗೆಯ ಕೊಡೊ । ಸದಾಶಿವ । ನಾಗಸಂಪಿಗೆಯ ಕೊಡೊ ॥ 1 ॥

ಕೆಂಡಗಣ್ಣಿನ ಹರನೆ । ಪ್ರಚಂಡ ವಿಘ್ನೇಶನ ಪ್ರಿಯ ಪಿತನೆ ।

ಪುಂಡರಿಕಾಕ್ಷನೆ ಕೆಂಡಗಣ್ಣಿನ ಹಾರ । ಮಂಡೆಯೊಳ್ಗಂಗೆಯ ಧರಿಸಿದ ದೇವನೆ ।

ದುಂಡು ಮಲ್ಲಿಗೆಯ ಕೊಡೊ । ಸದಾಶಿವ । ದುಂಡುಮಲ್ಲಿಗೆಯ ಕೊಡೊ ॥ 2 ॥

ಮುಕ್ಕಣ್ಣ ಹರನೆ ನಿನ್ನ । ಸಿರಿ ಚರಣಕೆ । ಸಾಷ್ಟಾಂಗವೆರಗುವೆನು ।

ಅಪ್ಪು ತಪ್ಪುಗಳನ್ನು ಒಪ್ಪಿ ನೀ ಪಾಲಿಸೊ । ಶಕ್ತಿವಲ್ಲಭನೆ ನಿನ್ನ ।

ಭಕ್ತರಿಗೆ ಮನ । ದಿಚ್ಛೆ ಮಲ್ಲಿಗೆಯ ಕೊಡೊ ॥ 3 ॥

## 12.14 ಶಿವ ಸ್ತುತಿ

ಪಾಲಿಸಯ್ಯಾ ಪಾರ್ವತೀಶ್ವರಾ ॥ ನೀ ಎನ್ನೊಳೊಲಿದು ॥ ಪ ॥

ಪಾಲಿಸಯ್ಯ ಪಾರ್ವತೀಶ । ಲೋಲ ನೇತ್ರ ಭಕ್ತ ಪೋಷ ।

ನೀಲಕಂಠ ಪಾರಮೇಶ । ಶೂಲ ಧಾರಿ ತ್ರಿಪುರಹರನೆ ॥ ಅ.ಪ ॥

ಓಂಕಾರ ಸ್ವರೂಪ ಈಶ್ವರ । ಶೋಕಾದಿ ಭಕ್ತ । ಕಿಂಕರ ದುಷ್ಟರ ನಾಶನೆ ।

ಶಂಕರ ಎಂದೆನಿಸಿಕೊಂಡೆ । ಕಿಂಕರರೊಳು ಪೂಜೆಗೊಂಡೆ ।

ಶಂಕರಿಯ ಪ್ರಾಣಕಾಂತ । ಶಾಂತಕಾ ಶ್ರೀ ರಾಮನಾಥ ॥ 1 ॥

ಶಿವ ಶಿವ ಶ್ರೀ ರಾಮನಾಥನೆ । ತ್ರಿಶೂಲಧಾರಿ । ಭವಹರ ಭವಾನಿ ಕಾಂತನೆ ।

ದೇವ ದೇವ ಎನಿಸಿ ಜಗದೊಳು । ಭವ ಭಯವ ಪರಿಹರಿಸೊ ।

ಕೈವಲ್ಯಾತ್ಮಾನಂದ ನಿನ್ನ । ಮೇಲೆ ಮನಸ ನೆಲೆಸೊ ದೇವ ॥ 2 ॥

ಮಹಾನುಭಾವ ಮದನ ಸುಂದರ । ಮಹಾದೇವ । ಮಾಬಲೇಶ ಮಧುಕರೇಶ್ವರ ।

ಮಹಿಯೊಳಿರುವ ಭಕ್ತರನ್ನು । ಮೋಹವಿತ್ತು ಕಾಯೊ ಎನ್ನ ।

ಮೇಲೆ ಮೋಹವನ್ನು ನೀನು । ಸರ್ವಕಾಲದಲ್ಲಿ ನಡೆಸು ॥ 3 ॥

----- ****** -----

# 13 ವಿಷ್ಣು

## 13.1 ವಿಷ್ಣು ಸ್ತುತಿ

ರಕ್ಷಿಸು ಶ್ರೀ ಹರಿಯೆ । ಮುರಾರಿರೆ । ರಕ್ಷಿಸು ನರಹರಿಯೆ । ರಕ್ಷಿಸೈ ಅನುದಿನ ।
ಕರುಣಕಟಾಕ್ಷದಿ । ಪಕ್ಷಿವಾಹನ ಎನ್ನ ದುರ್ಗುಣ ಬಿಡಿಸಿ ॥ ಪ ॥

ದೀನ ದಯಾಪರನೆ । ಎನ್ನೆಯ ಬೋಧಾತ್ಮಕನು ನೀನೆ । ನಾನು ನೀ ಈ ಭ್ರಮೆಗಳ ।
ಬಿಡಿಸಿ ನಿನ್ನೆಯ ಪಾದ । ಧ್ಯಾನದೊಳಿರಿಸೆನ್ನ । ಪನ್ನಗಶಯನನೆ ॥ 1 ॥

ಅಣುರೇಣು ಪ್ರಣ ಕಷ್ಟದಿ । ತುಂಬಿಹೆ ನಿನ್ನ ಅನುದಿನ ಧ್ಯಾನಿಸದೆ । ಅನುದಿನ
ಚದುರಂಗ ಪಗಡೆಯನಾಡುತ । ಮಿನುಗು ಜನರ ಸಂಗದಲಿ ನಿನ್ನ ಮರೆತೆನು ॥ 2 ॥

ನಿರುತಾತ್ಮ ಸ್ತುತಿ ಗೈಯುತ । ಮದ ಗರ್ವದಿ ಪರರ ನಿಂದನೆ ಗೈಯುತ ।
ದುರುಳರ ಕಥೆಗಳ ಕೇಳುವುದಲ್ಲದೆ । ಹರಿ ಕಥೆಗಳ ಕೇಳಲೊಲ್ಲದು ಎನ್ನ ಮನ ॥ 3 ॥

ಸತಿ ಸುತರೆಂತೆಂಬುವ । ಸಂದಣೆಯಲ್ಲಿ ಅತಿಮಗ್ನನಾಗಿರುವೆ । ಗತಿಹೀನನಾದೆನ್ನ
ಮತಿಯೊಳು ಪಾಲಿಸಿ । ಪತಿತ ಪಾವನನೆಂಬ ಬಿರುದು ತೋರಿಸು ದೇವ ॥ 4 ॥

ಕಂದಳಾಗಿಹೆ ನಾನು । ಕಾಪಾಡುವ ತಂದೆಯಾಗಿರುವೆ ನೀನು । ಸಂದೇಹ ಯಾಕಿನ್ನು
ಗುರುರಂಗರೂಪನೆ । ಬಂದೆನ್ನ ಹೃದಯದಿ ನಿಂದು ಪಾಲಿಸು ದೇವ ॥ 5 ॥

## 13.2 ವಿಷ್ಣು ಸ್ತುತಿ

ನೀನೆ ತೋರೊ ದಯವಾ ಮುದದಿಂದ ॥ ದೀನಪಾಲ ಬೇಡುವ ಸುಮವೊಂದ ॥ ಪ ॥

ಮುರುಗ ಮಲ್ಲಿಗೆ ಜಾಜಿ । ವರಸೇವಂತಿ । ಸುರುಗಿ ಕೇದಿಗೆ ಒಳ್ಳೆ ಸೂರ್ಯಕಾಂತಿ ।
ಸರಿದಾರಿಯಲಿ ಭವ ಶರಧಿ ದಾಟಿಸುವುದೊ ॥ 1 ॥

ಕಲ್ಲುರ ಕರವೀರ । ಮಲ್ಲಿಗೆ ಸರದಾರ । ಎಲ್ಲ ಪುಷ್ಪವು ಬೇಡ ಒಲ್ಲೆನು ದೇವಾ ।
ಉಲ್ಲಸವಾಗಿ ನಿನ್ನೊಳು ಉದಿಸಿದ ಸುಮವೊಂದ ॥ 2 ॥

ಮಂದಾರದ ಹೂ । ಚಂದ ಅದರ ಗುಣ । ಕುಂದದಿರದು ಅದು ಒಂದೇ ಕ್ಷಣ ।
ಕುಂದದ ಚಂದದಾನಂದದ ಸುಮವೊಂದ ॥ 3 ॥

ವಾಸನೆ ಪುಷ್ಪವು । ಲೇಸೆಂದು ಪಿಡಿದೆಡೆ । ಮಾಸಿದ ಬಳಿಕದು ಲೇಸಹುದೋ ।
ಸಾಸಿರ ದಳದಿ ಪ್ರಕಾಶಿಪ ಸುಮವೊಂದ ॥ 4 ॥

ಮರುಳು ಮಾಯದ ಭವ । ಪಾಶೆಯ ಬಿಡಿಸಿ । ನಿರುತವು ತವ ಪಾದ ಸೇವೆಯೊಳಿರಿಸಿ ।
ಅರಿವು ಮರೆವು ಕಳೆಯುವ ಸುಜ್ಞಾನವ ॥ 5 ॥

## 13.3 ವಿಷ್ಣು ಸ್ತುತಿ

ಮಂಗಲಂ ಜಯ । ಮಂಗಲಂ ಶುಭ । ಮಂಗಲಂ ಗೋವಿಂದಗೆ ॥
ಮಂಗಳಾಂಗ ಸುರೇಶ ವಂದಿತ । ರಂಗನಾಥ ಮುಕುಂದಗೆ ॥ ಪ ॥

ಜಲದಿ ಮತ್ಸ್ಯಾಕೃತಿಯ ತಾಳುತ । ಛಲದಿ ವೇದವ ತಂದಗೆ ॥
ಸುಲಭದೊಳು ಮಂದರವ ಬೆನ್ನಲಿ । ಇರಿಸಿಕೊಂಡಿಹ ಕೂರ್ಮಗೆ ॥ 1 ॥

ಆಳದಿ ಹಿರಣ್ಯಾಕ್ಷನನು ಮರ್ದಿಸಿ । ಇಳೆಯ ತಂದಿಹ ವರಾಹಗೆ ॥
ಒಲಿದು ತರಳಗೆ ಸಿಂಹ ರೂಪವ । ತಳೆದು ಪೊರೆದ ನರಸಿಂಹಗೆ ॥ 2 ॥

ಮೆಟ್ಟಿ ಬಲಿಯನು ಭರದಿ ಸುತಳದೊಳಿಟ್ಟ ವಾಮನ ಮೂರ್ತಿಗೆ ॥
ಕುಟ್ಟಿ ಬಹುಜನರನ್ನು ಅಟ್ಟಿದ । ದಿಟ್ಟ ಭಾರ್ಗವ ರಾಮಗೆ ॥ 3 ॥

ಕಟ್ಟಿ ಸೇತುವ ದಶಶಿರಾದ್ಯರ । ಕುಟ್ಟಿ ಸೀತೆಯ ತಂದಗೆ ॥
ದಿಟ್ಟ ಕಂಸನ ಕೊಂದು ಮಧುರೆಯೊಳ್ । ಅಟ್ಟಹಾಸದಿ ಮೆರೆದಗೆ ॥ 4 ॥

ದುರುಳ ತ್ರಿಪುರರ ಸತಿಯರಿದಿರೊಳು । ತೆರಳಿ ಬೆತ್ತಲೆ ನಿಂದಗೆ ॥
ತುರಗ ವಾಹನ ಖಡ್ಗ ಧರಿಸಿಹ । ಅರಸನಾಗಿಹ ಕಲ್ಕ್ಯಗೆ ॥ 5 ॥

## 13.4 ವಿಷ್ಣು ಸ್ತುತಿ

ಮಂಗಲಂ ಜಯ ಲಕ್ಷ್ಮಿ ರಮಣನಿಗೆ ॥ ಜಯ ಮಂಗಳ ಮೂರ್ತಿಗಾರತಿ ಎತ್ತಿರೆ ॥ ಪ ॥

ಅಂಗಜಾನಯ್ಯ । ಭುಜಂಗ ವಾಹನನಿಗೆ । ಸಂಗರಹಿತ ಪರಮಾತ್ಮನಿಗೆ ॥
ಬಂಗಾರದ ಗಿರಿ ವಾಸ ತಿಮ್ಮಪ್ಪ ಶ್ರೀ । ರಂಗಗಾರತಿಯ ತಂದೆತ್ತಿದರೆ ॥ 1 ॥

ಮತ್ಸ್ಯಗೆ ಕೂರ್ಮಗೆ । ವರಹ ನರಸಿಂಹಗೆ । ಪೃಥ್ವಿಯ ದಾನವ ಬೇಡಿದಗೆ ।
ಕ್ಷತ್ರಿಯ ಕುಲದ ದುಷ್ಟರನೆಲ್ಲ ಕೆಡಿಹಿದ । ಹಸ್ತದಿ ಪಿಡಿದ ಪರಶು ರಾಮಗೆ ॥ 2 ॥

ದಶರಥ ಪುತ್ರಗೆ ಪಶುಪತಿ ಮಿತ್ರಗೆ । ದಶಕಂಠಾದಿಗಳ ಸಂಹರಿಸಿದಗೆ ।
ಶಶಿಮುಖಿ ಸೀತಾರಮಣನೆಂದೆನಿಸಿದ । ವಸುಧೆ ಬಾಲಕ ರಾಮಚಂದ್ರನಿಗೆ ॥ 3 ॥

ವಾರಿಜ ನಾಭಗೆ । ಅಪಾರಮಹಿಮನಿಗೆ । ನಾರಿ ದೇವಕಿ ಸುಕುಮಾರನಿಗೆ ।
ಧಾರುಣಿ ಭಾರಪಹಾರವ ಗೈದ ಶ್ರೀ । ನಾರಾಯಣರಿಗಾರತಿ ಎತ್ತಿರೆ ॥ 4 ॥

ಸತಿಯರ ವ್ರತಗಳ ಕೆಡಿಸಿಹ ಬೌಧ್ಯಗೆ । ಮತವ ಪಾಲಿಸುವಂಥ ಕಲ್ಕ್ಯನಿಗೆ ।
ಕ್ಷಿತಿಯೊಳು ವರದ ಕಂದರ ಸಿದ್ಧಿಕಾಂತಗೆ । ಮತಿ ಭಕ್ತಿ ಸತಿಯರಾರತಿ ಎತ್ತಿರೆ ॥ 5 ॥

## 13.5 ರಾಮ ಭಜನೆ

ರಾಮಾ ಎಂಬೆರಡಕ್ಷರದ ಮಹಿಮೆಯನು । ಪಾಮರರು ತಾವೇನು ಬಲ್ಲರಯ್ಯಾ ॥ ಪ ॥

ರಾ ಎಂದ ಮಾತ್ರದೊಳು ರಕ್ತ ಮಾಂಸದೊಳಿದ್ದ । ಆಯುಸ್ಥಿತಿಗತವಾದ ಅತಿಪಾಪವನ್ನು ।
ಮಾಯವನು ಮಾಡಿ ಮಹರಾಯ ಮುಕ್ತಿಯ ಕೊಡುವ ।
ದಾರಿಯನು ವಾಲ್ಮೀಕಿ ಮುನಿರಾಯ ಬಲ್ಲ ॥ 1 ॥

ಮತ್ತೆ ಮಾ ಎಂದೆನಲು ಹೊರಬಿದ್ದ ಪಾಪಗಳು ।
ಒತ್ತಿ ಒಳಗ್ ಹೋಗದಂತೆ ಕವಾಟವಾಗಿ ।
ಚಿತ್ತಕಾಯದೊಳೆನ್ನ ಪವಿತ್ರ ಮಾಡುವ ಪರಿಯ ।
ಭಕ್ತ ವರ ಹನುಮಂತನೊಬ್ಬ ತಾ ಬಲ್ಲ ॥ 2 ॥

ಧರೆಯೊಳೀ ನಾಮಕ್ಕೆ ಸರಿ ಮಿಗಿಲು ಇಲ್ಲೆಂದು । ಪರಮವೇದಗಳೆಲ್ಲ ಪೊಗಳುತಿಹವು ।
ಸಿರಿಯರಸ ಪುರಂದರ ವಿಠಲನ ನಾಮವನು ।
ಸಿರಿಕಾಶಿಯೊಳಗಿಪ್ಪ ಶಿವನು ತಾ ಬಲ್ಲ ॥ 3 ॥

## 13.6 ವಿಷ್ಣು ಸ್ತುತಿ

ಅಮೃತಕ್ಕೂ ತಾ ರುಚಿ । ನಾಮ ನಿನ್ನ ದೇವ ॥ ಪ ॥ ಮನವೆ ನೀ ಕೇಶವನ ।

ನಾಮ ನುಡಿ । ನಾಮ ನುಡಿ ॥ ಅ.ಪ ॥

ಕೀರ್ತನೆಯ ಭಾವದಿ ನಿದ್ರೆ ನಾಶವಾಗಲಿ ।

ಮನದಿ ಬೆಂದು ಹೋಗಲಿ ವಿಷಯಾಸುಖ ॥ 1 ॥

ಹರಿದಾಸಗರ್ಜಿಸೆ । ಹರಿನಾಮದಾ ಕೀರ್ತಿ ।ತುಕಾ ಪಾಡುತಿರಲಿ । ನಾಮಾಮೃತಾ ॥ 2 ॥

## 13.7 ವಿಷ್ಣು ಸ್ತುತಿ

ಹಗಲು ಇರುಳು ನಿನಗೆ ನಮನ । ತನುವೆ ತವಪದಾರ್ಪಣ ।

ಕವನ ಕಾವ್ಯ ಧ್ಯಾನ ಮನನ । ಇದುವೆ ನಿನಗೆ ತರ್ಪಣಾ ॥ ಪ ॥

ಅರಿತು ಬಾಳಿ ಬೆಳಗಲೆಂದು । ಹರಸು ನಮ್ಮ ಜೀವನ ।

ಶಾಂತಿ ಕಾಂತಿ ಸದೃಢಕಾಯ । ನೀಡೋ ಸುಗುಣ ಮೋಹನಾ ॥ 1 ॥

ಆಗು ಹೋಗು । ಅಳಿವು ಉಳಿವು । ನಿನ್ನ ತಂತ್ರ ಕಾರಣಾ ।

ಜನನ ಮರಣ । ಸುಕೃತ ವಿಕೃತ । ಇದುವೆ ನಿನಗೆ ಶಾಸನಾ ॥ 2 ॥

## 13.8 ವಿಷ್ಣು ಭಜನೆ

ಸಾರಿ ಬೇಡುವೆ ಮಾಧವಾ । ತೋರೊ ನಿನ್ನಯ ಪಾದವಾ ॥ ಪ ॥

ಬಾರಿ ಬಾರಿಗೂ ಭಜಿಸುವೆ । ಬಾರೋ ಒಲಿದು ಮುರಾರಿಯೆ ॥ ಅ.ಪ ॥

ಬಳಲುತಿರುವೆನು ಭವದೊಳು । ನೀಡೊ ದರುಷನ ಇಳೆಯೊಳು ।

ನೀಲ ಮೇಘ ಶ್ಯಾಮನೆ । ಬಾರೊ ಒಲಿದು ಮುರಾರಿಯೆ ॥ 1 ॥

ತಂಗಿ ದ್ರೌಪದಿ ನಿನ್ನೊಳು । ಅಣ್ಣ ನೀ ಪೊರೆ ಎನ್ನಲು ।

ಬಂದು ಮಾನವ ಕಾಯ್ದೆಯೊ । ಅಂದು ಸಭೆಯೊಳು ಶ್ರೀಹರಿ ॥ 2 ॥

ಸುಂದರಾಂಗನೆ ನಿನ್ನಯ । ಸುಂದರಾಕೃತಿ ತೋರೆಯಾ ।

ಆನಂದದಾಯಕ ಭಾಗ್ಯವಾ । ನಮಗೆ ಕರುಣಿಸೊ ಶ್ರೀಹರಿ ॥ 3 ॥

## 13.9 ವಿಷ್ಣು ಜೋಗುಳ

ಪಾಡಿ ತೂಗಿದಳೆ ಪರಮಾತ್ಮನ । ಯಶೋಧಾ ದೇವಿ ।

ನೋಡಿ ಹಿಗ್ಗಿದಳೆ ಸರ್ವೋತ್ತಮನ ॥ ಪ ॥

ಮಾಣಿಕದ ತೊಟ್ಟಿಲೊಳಿಟ್ಟು ತೂಗಲು । ಪಾಡೀ ತೂಗಿದಳೆ ಪರಮಾತ್ಮನ ॥ ಅ.ಪ ॥

ಕ್ಷೀರವಾರಿಧಿ ಶ್ರೀಹರಿ ತಾನು । ಆಲದೆಲೆ ಮೇಲೆ । ಬಾಲರೂಪಿನಲಿ ಪವಡಿಸುತಿರಲು ।

ವೇದಾಂತವೇದ್ಯದಿ ನಲಿಯುತ ತಾನು । ಮಾಧವ ಮಧುಸೂಧನ । ಮುದ್ದು ಕೃಷ್ಣನ ॥ 1 ॥

ನೀರೊಳು ಮುಳುಗಿ ಭಾರವ ಪೊತ್ತು । ಬಲಿಚಕ್ರವರ್ತಿಯಾ ।

ಮೂರಡಿ ಭೂಮಿಯ ದಾನವ ಬೇಡಿ । ನಾರಿ ಸೀತೆಯ ತಂದು ಕ್ಷೀರ ಪಾವನ ಮಾಡಿ ।

ಧೀರನಾಗಿಯೆ ಕುದುರೆ ಏರಿ ಕೃಷ್ಣಯ್ಯನ ॥ 2 ॥

ಪಂಕಜನಾಭನೆ ಪಾವನಚರಿತ । ತನ್ನ ಬೆರಳ । ಬಾಯೊಳಗಿಟ್ಟು ನಲಿವ ।

ತನ್ನ ತಾಯಿಯ ಮುಖ ನೋಡುತ ನಲಿಯುತ ।

ಉನ್ನತ ಗಿರಿವಾಸ ಚೆನ್ನಕೇಶವರಾಯನ ॥ 3 ॥

----- ****** -----

# 14 ಸತ್ಯನಾರಾಯಣ ಪೂಜೆ

## 14.1 ಸತ್ಯನಾರಾಯಣ ಕಥೆ ಹಾಡು

ಗುರುಗಣಪತಿ ಶಾರದೆಗಭಿವಂದಿಸಿ । ಹರಿಹರ ಸಿರಿಸತಿಯರಿಗೆರಗಿ ।
ಒರಿವೆನು ಸತ್ಯನಾರಾಯಣ ಕಥೆಗಳ । ಗುರುಕೃಪೆಯಿಂದ ಸಂಕ್ಷೇಪದಲಿ ॥ ಪ ॥
ಮಂಗಲಂ ಜಯ ಮಂಗಲೆ ॥

ಮಂಗಲಂ ಸತ್ಯನಾರಾಯಣ ದೇವಗೆ । ಮಂಗಲಂ ನಿತ್ಯ ನಿರಂಜನಗೆ ।
ಮಂಗಲಂ ಪ್ರತ್ಯಕ್ಷ ವರವನು ಕೊಡುತಿಹ । ಮಂಗಲಂ ಭಕ್ತವತ್ಸಲ ಹರಿಗೆ ॥ 1 ॥

ಮೊದಲು ಕಾಶಿಯೊಳು ಬಡ ವಿಪ್ರನೋರ್ವನು । ವಿಧಿಯಂತೆ ಈ ಕಥೆಗಳ ಮಾಡಿ ।
ವಿಧ ವಿಧ ಸಂಪದ ಇಹದೊಳು ಭೋಗಿಸಿ । ತುದಿಗೆ ತಾ ಸ್ವರ್ಗವ ಸೇರಿದನು ॥ 2 ॥

ಸೌದೆಯ ಮಾರುವ ಒಬ್ಬ ಈ ಕಥೆ ಮಾಡಿ । ಮೇಧಿನಿಯೊಳು ಸಂಪದ ಪಡೆದ ।
ಸಾಧು ವೈಶ್ಯನು ವ್ರತ ಮಾಡ್ವೆನೆಂದುದರಿಂದ । ಆದುದು ಸಂತತಿ ಅವಗಾಗ ॥ 3 ॥

ಎಂದಂತೆ ಕಥೆಯನು ಮಾಡದಿದ್ದುದರಿಂದ । ಪೊಂದಿದ ವಿಧ ವಿಧ ಕಷ್ಟಗಳ ।
ಮುಂದೆ ಈ ಕಥೆ ಮಾಡಿ ಸಾಧು ವೈಶ್ಯನು ತಾನು ।
ಎಂದಿನಂದದಿ ಸುಖ ಪೊಂದಿದನು ॥ 4 ॥

ಸಾಧು ಸುತೆಯು ಪ್ರಸಾದ ಭಕ್ಷಿಸದಿರೆ । ಮೇಧಿನಿಯೊಳು ಪತಿ ಕಾಣದಾದ ।
ಮೋದದಿ ಭಕ್ಷಣ ಮಾಡಲು ತಕ್ಷಣ । ಆದುದು ಪತಿ ದರುಶನ ಅವಳಿಗೆ ॥ 5 ॥

ಅರಸು ತುಂಗಧ್ವಜ ತ್ಯಜಿಸಿ ಪ್ರಸಾದವ । ವಿಧ ವಿಧ ಕಷ್ಟಗಳನುಭವಿಸಿ ।
ಧರೆಯೊಳೀ ಕಥೆ ಮಾಡಿ ಇಹ ಸೌಖ್ಯವ ಪೊಂದಿ । ಪರದಲ್ಲಿ ಸೇರಿದ ಹರಿ ಪಾದವ ॥
6 ॥

ಹರಿಯು ನಾರದರಿಗೆ ಸೂತ ಪುರಾಣಿಕ । ಒರೆದರು ಶೌನಕಾದಿಗಳಿಂದೆ ।
ಧರೆಯೊಳಗತಿ ಸಂಕ್ಷೇಪವ ಮಾಡಿಯೆ । ಮಂಗಲ ಪೇಳಿದ ಭಗಿನಿಯರಿಗೆ ॥ 7 ॥

ಮಂಗಲಂ ಸತ್ಯನಾರಾಯಣ ದೇವಗೆ । ಮಂಗಲಂ ಶ್ರೀಧರ ಯತಿವರಗೆ ।
ಮಂಗಲಂ ಪ್ರತ್ಯಕ್ಷ ಪರಮ ಪಾವನನಿಗೆ । ಮಂಗಲಂ ದೇವಿ ಕುಮಾರನಿಗೆ ॥ 8 ॥

## 14.2 ಸತ್ಯನಾರಾಯಣನ ಪೂಜೆ

ಪೂಜಿಸುವೆನು ಸತ್ಯ । ನಾರಾಯಣ ದೇವ । ನಿಜರೂಪದಿ ಬಂದು ಸ್ವೀಕರಿಸೊ ॥ ಪ ॥

ತ್ರಿಜಗದೊಡೆಯ ಕರಿರಾಜನ ಸಲಹಿದ । ಅಜಮಿಳ ಸ್ವಾಮಿಯೆ । ಶ್ರೀಹರಿಯೆ ॥ 1 ॥

ಆದಿಪುರುಷನೆ । ಮಾಧವನೆ ನೀ ಗೈದಿಹ । ಎನ್ನಪರಾಧವ ಕ್ಷಮಿಸೊ ॥ 2 ॥

ಕೇದಿಗೆ ಕರವೀರ । ನೈದಿಲೆ ಚಂಪಕ । ಮೊದಲಾದಾ ಪರಿ ಪುಷ್ಪಗಳನೇರಿಸಿ ॥ 3 ॥

ದುಷ್ಟರ ಶಿಕ್ಷಕ । ಶಿಷ್ಟರ ರಕ್ಷಕ । ಇಷ್ಟಾರ್ಥಗಳಾ ಕೊಟ್ಟು ನೀ ಸಲಹೊ ॥ 4 ॥

ಶ್ರೇಷ್ಠನೆ ನಿರತ ದೃಷ್ಟ ಮಾನಸನೆ । ಸೃಷ್ಟಿಯೊಳಿರುವ ಅಷ್ಟಾಕ್ಷರನೆ ॥ 5 ॥

ನೀರೊಳಗಾಡುವ ನಾರಿಯರಿಗೆ ನೀ । ವರಗಳ ಕೊಡಲು ಸೀರೆಯ ಸೆಳೆದೆ ॥ 6 ॥

ಮಾರಜನಕನೆ ಸಿರಿಹಯವದನನೆ । ಗುರುವಿರೂಪಾಕ್ಷನ ಸೇವಕಿ ನಾ ॥ 7 ॥

## 14.3 ಸತ್ಯನಾರಾಯಣನಿಗೆ ನೈವೇದ್ಯ

ಸತ್ಯನಾರಾಯಣ ಮೂರ್ತಿ ಗ್ರಹಿಸೊ । ಉತ್ತಮ ಭೋಜನವ । ದೇವಾ ।
ನಿತ್ಯ ನಿರಂಜನನೆ ॥ ಪ ॥

ಪೂರ್ತಿಗೊಳಿಸು ಎನ್ನಿಷ್ಟಾರ್ಥವನು । ಧಾತ್ರಿಯೊಳಗೆ ನಾ ಪ್ರಾರ್ಥಿಸುವೆನು ಶ್ರೀ॥ 1 ॥

ಕೌತುಕ ಚರಿತ । ಖ್ಯಾತಿವಂತ । ಪೀತಾಂಬರಧಾರಿ । ಸಿರಿಯಾ ಪತಿ ಕಮಲನಯನ ।
ಮತಿವಂತರೊಳು ವಾಸಿಸುವವನೆ । ನುತಿಯನು ಗೈವೆ ಅತಿಶಯವಾಗಿ ॥ 2 ॥

ದ್ವಾಪರ ಯುಗದಿ । ಗೋಪ ಗೋಪಿಯರ । ತಾಪವ ಕಳೆದಿರುವ । ಶ್ರೀಲೋಲ ।
ಪತಿಗಗ್ರಜನೆ । ಕೃಪೆಯನು ಮಾಡು ಹೇ ಪರಮಾತ್ಮಾ ।
ವಿಪುಲವಾದ ರುಚಿಕರವಾದ ॥ 3 ॥

ರೂಪ ರಹಿತನೆ । ತಾಪಹಾರಿ । ರಿಪು ಸಂಹಾರಕನೆ । ನಾ ನಾ ರೂಪಧಾರಿಯೆ ನಿನಗೆ ।
ಸಪಾದ ಪ್ರಿಯನೆ । ಹೋಳಿಗೆ ಬೂಂದ್ಯ । ಆಪೂಪಗಳಿಂದ ಒಡಗೂಡಿರುವ ॥ 4 ॥

ನೀಲ ಬಣ್ಣದೊಳು ಮೆರೆವ ಹರಿಯೆ । ಥಳಥಳಿಪ ಮಣಿಯ ।
ಮುತ್ತ ಮಾಲೆಯ ಧರಿಸಿರುವೆ । ಜಲಜನಾಭನೆ ಶ್ಯಾವಿಗೆ ಪಾಯಸ ।
ಕಲಸನ್ನ ಮೊಸರನ್ನಗಳನು ॥ 5 ॥

ಅರಿಹಾರಿಯೆ ನೀ ತೊರೆಯದಿರೆನ್ನ । ಪೊರೆಯುವದನವರತ । ಹರಿಯೆ ।
ಮರೆಯಬೇಡದನ । ಸೆರಗನು ಒಡ್ಡಿ ಬೇಡುವೆನಯ್ಯಾ ।
ಗುರುವಿರೂಪಾಕ್ಷನ ಸೇವಕಿ ನಾ ॥ 6 ॥

## 14.4 ಸತ್ಯನಾರಾಯಣನಿಗೆ ಆರತಿ

ಅಷ್ಟದಳದ ಮಂಟಪದಿ । ಸೃಷ್ಟೀಶ ದೇವನ ಇರಿಸಿ । ನಿಷ್ಠೆಯಿಂದಲಿ ಬುಧರೆಲ್ಲರು ಕೂಡಿ ॥ ವಿಶಿಷ್ಟ ಮಂತ್ರಗಳಿಂದ ಪೂಜೆಯ ಮಾಡಿ । ತಮ್ಮಿಷ್ಟದ ವರವ ದಯಮಾಡಬೇಕೆನುತಾಲೆ । ಕರ್ಪೂರದಾರತಿಯ ಬೆಳಗಿದ ॥ 1 ॥

ಶ್ರೀಪತಿ ಪರಿವಾರಗಳು । ದೀಪಪ್ರಕಾಶದಂತಿರಲು । ದೀಪ ಧೂಪ ಮಂಗಳಾರತಿ ಮಾಡಿ ॥ ಸಪಾದ ಭಕ್ಷವ ನೈವೇದ್ಯಕೆ ನೀಡಿ । ತಾಪರಹಿತ ಚಿದ್ರೂಪನಾದವಗೆ । ಧೂಪದಾರತಿಯ ಬೆಳಗಿದ ॥ 2 ॥

ಸಾಗರ ತನುಜೆಯು ಸಹಿತ । ನಾಗಶಯನ ಕುಳ್ಳಿರಲು । ನಾಗ ಯೋಗಾನಂದದಿ ವಿಬುಧರು ॥ ತಮ್ಮಿಷ್ಟ ಭೋಗವ ಕರುಣಿಸಬೇಕೆಂದೆನುತ । ಪೂಗ ಪುನ್ನಾಗ ತಾಂಬೂಲ ಸಮರ್ಪಿಸಿ । ಹೂವಿನಾರತಿಯ ಬೆಳಗಿದ ॥ 3 ॥

ಮಂಗಲಂ ಸತ್ಯದೇವನಿಗೆ । ಮಂಗಲಂ ನಿತ್ಯ ನಿರ್ಮಲಗೆ । ಮಂಗಲಂ ಮಂಗಲಂ ಪರಮಾತ್ಮನಿಗೆ ॥ ಮಂಗಲಂ ಮಂಗಲಂ ತೇಜೋಮಯನಿಗೆ । ಮಂಗಲಂ ಮಂಗಲಂ ಸಚ್ಚಿದಾನಂದಗೆ । ಮಂಗಳಾರತಿಯ ಬೆಳಗಿದ॥ 4 ॥

ಮಂಗಲಂ ಸತ್ಯದೇವನಿಗೆ । ಮಂಗಲಂ ನಿತ್ಯ ನಿರ್ಮಲಗೆ । ಮಂಗಲಂ ಮಂಗಲಂ ಪರಮಾತ್ಮನಿಗೆ ॥ ಮಂಗಲಂ ಮಂಗಲಂ ಭವ ಭಯಹಾರಗೆ । ಮಂಗಲಂ ಭವ ಭಯ ನಾಶಗೆ । ಮಂಗಲಂ ಕಮಲಾರಮಣ ಸತ್ಯೇಶಗೆ । ಜಯ ಮಂಗಳಾರತಿಯ ಬೆಳಗಿದ ॥ 5 ॥

## 14.5 ಸತ್ಯನಾರಾಯಣನಲ್ಲಿ ಪ್ರಸಾದ ಬೇಡಿದ್ದು

ಪ್ರಾರ್ಥಿಸುವೆನು ದೇವ । ತೀರ್ಥ ಪ್ರಸಾದವ ।
ತಾತನೆ ಎನಗೆ ಸಂಪ್ರೀತಿಲಿ ಕರುಣಿಸು ॥ ಪ ॥

ವ್ರತವ ಮಾಡಲು ಸ್ವಾತಂತ್ರ್ಯವಿಲ್ಲೆನಗೆ । ಗತಿಯೆಂದರೇನೆಂತೆಂಬುದನರಿಯೆ ।
ಹಿತ ವಚನವೇನೆಂಬುದರಿಯೆ । ಸತತ ಸಂಸಾರದೊಳು ಸಿಲುಕಿಯೆ ।
ಪತಿತ ಪಾವನ ನಿನ್ನ ಪಾದವೆ । ಗತಿಯು ಕರುಣಿಸೆಂದೆನುತ ಬೇಡುವೆ ॥ 1 ॥

ಸ್ವಾರ್ಥಕೆನ್ನುತ ದುಡಿದು ಕಳೆದೆನು ದಿನವ । ಯಾತ್ರೆಯೆನ್ನುತ ಬಿಡದಿಟ್ಟೆನು ತನು ಮನವ ।
ಧಾತ್ರಿಪಾಲನೆ ಎನ್ನ ಜನ್ಮವ । ಸಾರ್ಥಕವ ಮಾಡಲಿಕೆ ನಿನ್ನಯ ।
ತೀರ್ಥಪ್ರಾಶನದಿಂದಲೆನ್ನ । ಪವಿತ್ರಗೊಳಿಸಿರಿಸಯ್ಯ ಅನುದಿನ ॥ 2 ॥

ಸಂಸಾರವೆಂಬ ಕಾನನದಿ ಕಂಗೆಟ್ಟು । ಸಂಶಯಪಡದಭಿಮಾನದಿಂದಿಷ್ಟು ।
ವಂಶದ ಬಲವಾದರೆಷ್ಟು । ಕಂಸ ವೈರಿಯೆ ಭಜಿಪೆನಿಷ್ಟು ।
ನಿಸ್ಸಂಶಯದಿ ಸಂಶಯವನೆಲ್ಲವ । ದ್ವಂಶಿ ಪಾಲಿಸು ನಿನ್ನೊಳಿಟ್ಟು ॥ 3 ॥

## 14.6 ಸತ್ಯನಾರಾಯಣನಿಗೆ ನೈವೇದ್ಯ

ಸ್ವಾಮಿ ಶ್ರೀ ಸತ್ಯನಾರಾಯಣನೆ ॥ ಪ ॥
ಆರೋಗಣೆ ಮಾಡೋ ನಿತ್ಯ ನಿರಂಜನನೆ ॥ ಅ.ಪ ॥

ವಾಸುಕಿಶಯನನೆ । ಶ್ರೀ ಲಕ್ಷ್ಮಿ ರಮಣನೆ । ವಾಸ ವೈಕುಂಠ ನಾರಾಯಣನೆ ।
ಸಾಸಿರನಾಮದ ಮಹಾವಿಷ್ಣು ದೇವನೆ । ದಾಸ ಜನರ ಹಿತ ರಕ್ಷಕನೆ ॥ 1 ॥

ಶೃಂಗಾರ ಪೀಠದಿ । ರಂಜಿಸಿ ಕಲಶವ । ಗಂಗಾಜಲವ ತುಂಬಿ ಅಲಂಕರಿಸಿ ।
ಕಂಗೊಳಿಸುವ ಸತ್ಯನಾರಾಯಣ ನಿನ್ನ । ಅಂಗ ಪೂಜೆ ಮಾಡಿ ನಮಸ್ಕರಿಸಿ ॥ 2 ॥

ಗುರುದ್ವಿಜರೊಡಗೂಡಿ । ಸಂಕಲ್ಪವನು ಮಾಡಿ । ಹರಿ ನಾರಾಯಣ ನಿನ್ನ ವ್ರತಕೆ ತಕ್ಕ ।
ಸರಿತೂಕ ಕ್ರಮದಂತೆ ರಚಿಸಿ ಸಪಾದವ । ಪರಮಭಕ್ತಿಯೊಳು ತಂದಿರಿಸುವೆವು ॥ 3 ॥

ವ್ರತ ಕಥೆ ಮಹಿಮೆಯ । ಹೇಳಿ ಕೇಳುವರಿಗೆ । ಸತತ ಆರಾಧನೆ ಮಾಡುವವಗೆ ।

ಅತಿಶ್ರೇಷ್ಠ ತೀರ್ಥ ಪ್ರಸಾದ ಸೇವಿಪರಿಗೆ । ಗತಿಮೋಕ್ಷ ಶಾಶ್ವತ ಫಲ ನೀಡುವೆ ॥ 4 ॥

----- ****** -----

# 15 ದೇಶಭಕ್ತಿ ಗೀತೆ

## 15.1 ದೇಶಭಕ್ತಿ ಗೀತೆ

ದೇಶವಿದೂ ಚಂದ । ಹಿಂದೂ । ದೇಶವಿದೂ ಚಂದ ॥ ಪ ॥

ಕೀರ್ತಿಯ ನಾಡು । ಸ್ಫೂರ್ತಿಯ ಬೀಡು । ಗಾಂಧಿಯ ತಾಯ್ನಾಡು ।

ಬಾಪು ಹುಟ್ಟಿದ ನೆಲೆವೀಡು ॥ 1 ॥

ಸುಂದರ ಸುಫಲಿತ ನದಿಗಳ ನಾಡು । ವಿಂಧ್ಯ ಹಿಮಾಚಲ ಗಿರಿಗಳ ಬೀಡು ।

ಧನ್ಯವಿದೀ ನಾಡು ಬಾಪು । ಹುಟ್ಟಿದ ನೆಲೆವೀಡು ॥ 2 ॥

ಗಾಂಧಿಯು ಕಲಿಸಿದ ಮಂತ್ರವು ಶಾಂತಿ । ಸ್ವಾತಂತ್ರ್ಯದವರು ಗೆದ್ದುದು ಶಾಂತಿ ।

ಬೆಳಗಲಿ ಈಗ ಶಾಂತಿ । ಇದುವೇ ಪಿತನಾತ್ಮಕೆ ಶಾಂತಿ ॥ 3 ॥

----- ****** -----

ಓಂ ತತ್ಸತ್.

# ಅರ್ಪಣೆ

ಪೂಜ್ಯ ತಾಯಿ - ತಂದೆ



ಶ್ರೀಮತಿ ಕಮಲಾ ದಕ್ಷಿಣಾಮೂರ್ತಿ ದಿಕ್ಷಿತ,

(1935 – 2002)



ಶ್ರೀ ದಕ್ಷಿಣಾಮೂರ್ತಿ ತಿಮ್ಮಣ್ಣ ದಿಕ್ಷಿತ, ಓಣಿಕೈ

(1927 – 1996)

## ಶ್ರೀಮತಿ ಕಮಲಾ ದಕ್ಷಿಣಾಮೂರ್ತಿ ಗ್ರಂಥಮಾಲಿಕೆಯ ಪ್ರಕಟಣೆಗಳು

1. ದೈನಂದಿನ ಪ್ರಾರ್ಥನಾ ಶ್ಲೋಕಗಳು
2. ಸಂದ್ಯಾವಂದನಾದಿ ನಿತ್ಯಕರ್ಮಗಳು
3. ನಿತ್ಯೋಪಯೋಗಿ ವೇದ ಮಂತ್ರಗಳು
4. ನಾಮ ಪಾರಾಯಣ ಸ್ತೋತ್ರಗಳು
5. ಪಂಚಾಯತನ ದೇವ ಪೂಜಾ ವಿಧಿ
6. ನಿತ್ಯ ಭಜನಾ ಪದ್ಧತಿ
7. ಆದಿ ಶಂಕರಾಚಾರ್ಯರ ಕೃತಿಗಳು
8. ಹಬ್ಬ-ಹರಿದಿನಗಳ ಆಚರಣೆ
9. ಓಣಿಕೈ ಮನೆತನ - ವಂಶ ವೃಕ್ಷ
10. ಹವ್ಯಕರ ಹಾಡುಗಳು
11. ಬಹೂಪಯೊಗೀ ನಾಮಾವಳಿಗಳು
12. ಶ್ರೀ ಗುರುಚರಿತ್ರ ಪದ್ಯ

## ಸದ್ಗುರು ಸುಜ್ಞಾನ ವೇದಿಕೆಯ ಪ್ರಕಟಣೆಗಳು

1. ವೈದಿಕ-ಜೀವನ ಕೈಪಿಡಿ
2. ವೈದಿಕ ಜ್ಯೋತಿ
3. ಪ್ರತಿ ಸಾಂವತ್ಸರಿಕ ಶ್ರಾದ್ಧ ಪ್ರಯೋಗ
4. ದೇವಿ ಆರಾಧನಾ ಪ್ರದೀಪ
5. ವಾಸ್ತು ಪ್ರಯೋಗ ದೀಪ
6. ಪುರಾಣೋಕ್ತ ಶ್ಲೋಕೈಃ ಪ್ರತಿ ಸಾಂವತ್ಸರಿಕ ಶ್ರಾದ್ಧ ಪ್ರಯೋಗ



**ಪ. ಪೂ. ನಾರಾಯಣಾನಂದ ತೀರ್ಥ ಪ್ರತಿಷ್ಠಾನ (ರಿ)**

ಸಂ. 431, ಶ್ರೀರಕ್ಷಾ, 7ನೇ ಮುಖ್ಯ ರಸ್ತೆ, ಇಸ್ರೋ ಬಡಾವಣೆ, ಬೆಂಗಳೂರು-560111,
ಕರ್ನಾಟಕ, ದೂರವಾಣಿ : +91 94482 42402, sddixit@outlook.com